## ಸ್ವಾತಂತ್ರ್ಯ ಸಮರದ ಆರಂಭದ

# ಹೆಜ್ಜೆಗಳು

ಯತಿರಾಜು ಸಿ.



# ಸ್ವಾತಂತ್ರ್ಯ ಸಮರದ ಆರಂಭದ ಹೆಜ್ಜೆಗಳು

ಸಿ.ಯತಿರಾಜು

ಪ್ರಕಾಶಕರು
ಭಾರತ ಜ್ಞಾನ ವಿಜ್ಞಾನ ಸಮಿತಿ

ಭಾರತ ಜ್ಞಾನ ವಿಜ್ಞಾನ ಸಮಿತಿ, ಕರ್ನಾಟಕ
ಭಾರತೀಯ ವಿಜ್ಞಾನ ಮಂದಿರದ ಆವರಣ
ಬೆಂಗಳೂರು - 12
ಫೋನ್ : 3342384

"Swatantra Samarada Arambhada Hejjegalu" A series of Desha Thiliyona Desha Badalisona, in the programme of our national movement. Written by C.Yethiraju on behalf of Bharath Gyan Vigyan Samithi, IIS Campus, Bangalore - 560 012

1998-99

Pages : IV+28



Rs. 6/-

Copies : 3000

Published by

**Shri C.Yathiraju**

Secretary
**Bharath Gyan Vigyan Samithi**
Indian Institute of Science Campus
Bangalore - 560 012
Phone: 3342384

DTP
**AKSHARA VINYASA**
No. 12, 18th Cross, S.R.Nagar
Bangalore - 27

# ಮುನ್ನುಡಿ

ಭಾರತವು ಸುಮಾರು 200 ವರ್ಷಗಳ ಕಾಲ ಬ್ರಿಟಿಶರ ಆಳ್ವಿಕೆಗೆ ಒಳಗಾಗಿತ್ತು. ಬ್ರಿಟಿಷರ ಆಡಳಿತ ದೌರ್ಜನ್ಯ, ದಬ್ಬಾಳಿಕೆಯಿಂದ ಕೂಡಿತ್ತು. ಸ್ವಾತಂತ್ರ್ಯಾನಂತರ ಜನಿಸಿದ ಯುವ ಪೀಳಿಗೆಗೆ ಆಗಿನ ಆಡಳಿತವು ಅಮಾನುಷ ಮತ್ತು ಅಮಾನವೀಯತೆಯಿಂದ ಕೂಡಿತ್ತು ಎಂಬ ಕಲ್ಪನೆಯೂ ಬರಲಿಕ್ಕಿಲ್ಲ. ಬ್ರಿಟಿಶ್ ಆಡಳಿತಗಾರರು ಆಟವಾಡುವ ಮೈದಾನದಲ್ಲಿ ಭಾರತೀಯರು ಕಾಲಿಟ್ಟರೆ ಕಠೋರ ಶಿಕ್ಷೆಗೆ ಒಳಪಡಬೇಕಾಗಿತ್ತು ಎಂಬ ಒಂದು ಉದಾಹರಣೆಯಿಂದ ಆಡಳಿತದ ಕಠೋರತೆಯನ್ನು ಗ್ರಹಿಸಬಹುದು. ಆಗಸ್ಟ್ 15, 1947 ರಂದು ಭಾರತವು ದಾಸ್ಯದ ಸಂಕೋಲೆಯನ್ನು ಕಳಚಿಕೊಂಡು, ಸ್ವತಂತ್ರವಾಯಿತು. ಆದರೆ ಈ ಸ್ವಾತಂತ್ರ್ಯ ಸಿಕ್ಕಿದ್ದು ಬೆಣ್ಣೆಯೊಳಗಿನ ಕೂದಲೆಳೆ ಹೊರತೆಗೆದಷ್ಟು ಸರಳವಾಗೇನೂ ಆಗಿಲ್ಲ. ಜನರ ಧೀರೋದಾತ್ತ ಹೋರಾಟ, ತ್ಯಾಗ ಬಲಿದಾನಗಳ ಮೂಲಕ ದಕ್ಕಿದೆ. ಭಾರತ ಸ್ವಾತಂತ್ರ್ಯ ಪಡೆದ ಬಗೆ ಯಾವುದು? ಸ್ವಾತಂತ್ರ್ಯ ಪಡೆಯಲು ಅನುಸರಿಸಿದ ಮಾರ್ಗ ಯಾವುದು? ಹೋರಾಟದ ರೂವಾರಿಗಳಾರು? ಇಂಥ ಹತ್ತು ಹಲವಾರು ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಭಾರತ ರಾಷ್ಟ್ರೀಯ ಚಳುವಳಿಯ ಘಟನಾವಳಿಗಳನ್ನು ವಿಶ್ಲೇಷಣೆ, ಅಧ್ಯಯನ ಮಾಡುವುದು ಅಗತ್ಯ.

ಬ್ರಿಟಿಷರ ಸಾಮ್ರಾಜ್ಯ ಸ್ಥಾಪನೆ ಹಾಗೂ ವಿಸ್ತರಣೆ ಕಾರ್ಯವು ಅತ್ಯಂತ ಸುಸೂತ್ರವಾಗಿ ನಡೆದು ಹೋಯಿತು ಎಂದು ಹೇಳಲಿಕ್ಕಾಗದು - ಸಾಮ್ರಾಜ್ಯ ಸ್ಥಾಪನೆಯ ಸಮಯದಲ್ಲೆ ಅವರು ಸಾಕಷ್ಟು ವಿರೋಧವನ್ನು ಸ್ಥಳೀಯರಿಂದ ಎದುರಿಸಬೇಕಾಯಿತು. 1857 ರಷ್ಟೊತ್ತಿಗೆ ಬ್ರಿಟಿಷರ ಶೋಷಣೆ ಮತ್ತು ದಬ್ಬಾಳಿಕೆ ಪರಾಕಾಷ್ಟೆ ತಲುಪಿದಾಗ ಸಮಗ್ರ ಜನತೆ ಬಂಡಾಯವೆದ್ದ ಘಟನೆಯನ್ನೇ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದು ಬಣ್ಣಿಸಲಾಗಿದೆ. ಇಂಥ ಪ್ರತಿಭಟನೆಯ ಮುಂದುವರಿದ ಭಾಗವೆ ಭಾರತ ರಾಷ್ಟ್ರೀಯ ಚಳುವಳಿ

ಭಾರತ ರಾಷ್ಟ್ರೀಯ ಚಳುವಳಿ ಪ್ರಾರಂಭದಿಂದ ಅಂತ್ಯದವರೆಗೆ ಒಂದೆ ರೀತಿಯಾಗಿ ನಡೆದಿಲ್ಲ. ಪ್ರಾರಂಭಿಕ ಹಂತದಲ್ಲಿ ಮಂದಗಾಮಿ, ಕ್ರಾಂತಿಕಾರಕ ಆಯಾಮಗಳನ್ನು ಪಡೆಯಿತು. ಒಂದು ಸಂದರ್ಭದಲ್ಲಿ ಬ್ರಿಟಿಷ್ ಸರಕಾರಕ್ಕೆ

ನೆರವಾಗುವುದು ತಮ್ಮ ಕರ್ತವ್ಯವೆಂದು ಭಾವಿಸಿದ್ದ ನಾಯಕರು ನಂತರದ ದಿನಗಳಲ್ಲಿ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' ಮತ್ತು ಭಾರತೀಯರಿಗೆ 'ಮಾಡು ಇಲ್ಲವೇ ಮಡಿ' ಎಂಬ ಕರೆಯನ್ನು ಕೊಡುವ ಮಟ್ಟವನ್ನು ತಲುಪಿದರು.

ಬ್ರಿಟಿಷ್ ಸರಕಾರದ ಒಡೆದು ಆಳುವ ನೀತಿ ಎಷ್ಟೆ ಪರಿಣಾಮಕಾರಿಯಾಗಿ ಕೆಲಸ ಮಾಡಿದಾಗ್ಯೂ ಜನರ ಐಕ್ಯ ಹೋರಾಟದ ಎದುರು ಅದು ನಿಷ್ಕ್ರಿಯ ಆಯಿತು. ಕೊನೆಗೆ ಈ ದೇಶದಿಂದ ನಿರ್ಗಮಿಸುವುದು ಬ್ರಿಟಿಶರಿಗೆ ಅನಿವಾರ್ಯವಾಯಿತು. ಹೀಗೆ ಭಾರತ ರಾಷ್ಟ್ರೀಯ ಚಳುವಳಿಯ ಚರಿತ್ರೆ ಅನೇಕ ಕೌತುಕದ ಘಟನೆಗಳಿಗೆ ಕೂಡಿದೆ.

ಭಾರತವು ಸ್ವಾತಂತ್ರ್ಯ ಸುವರ್ಣಮಹೋತ್ಸವ ಆಚರಿಸುತ್ತಿರುವ ಸಂದರ್ಭದಲ್ಲಿ ಭಾರತ ಜ್ಞಾನ ವಿಜ್ಞಾನ ಸಮಿತಿಯು ಹಲವಾರು ಶೈಕ್ಷಣಿಕ ಕಾರ್ಯಕ್ರಮಗಳ ಮಧ್ಯದಲ್ಲಿ ಭಾರತ ರಾಷ್ಟ್ರೀಯ ಚಳುವಳಿಯ ಚರಿತ್ರೆಯನ್ನು ಪರಿಚಯಿಸುವ ಕಾರ್ಯಕ್ರಮವನ್ನು ರೂಪಿಸಿತು. ಈ ಕಾರ್ಯಕ್ರಮಕ್ಕೆ ಕರ್ನಾಟಕ ಸರ್ಕಾರ ಸಹಾಯದ ಅಭಯಹಸ್ತ ನೀಡಿತು. ರಾಜ್ಯದ ಕೊಡಗು ಜಿಲ್ಲೆಯ ನಾಪೋಕ್ಲು ಮತ್ತು ಬೆಳಗಾಂವ ಜಿಲ್ಲೆಯ ಗೊಡಚಿಗಳಲ್ಲಿ ಶಿಕ್ಷಕರಿಗಾಗಿ ಎರಡು ಕಾರ್ಯಾಗಾರವನ್ನು ನಡೆಸಲಾಯಿತು. ಭಾರತ ರಾಷ್ಟ್ರೀಯ ಚಳುವಳಿಯ ವಿವಿಧ ಹಂತಗಳನ್ನು ಈ ಕಾರ್ಯಾಗಾರದಲ್ಲಿ ಅಧ್ಯಯನ ಮಾಡಲಾಯಿತು. ಇಲ್ಲಿ ಮಂಡಿಸಲಾದ ಲೇಖನಗಳ ಸಂಗ್ರಹಣೆ ಈ ಗ್ರಂಥವು.

ಈ ಪುಸ್ತಕ ಹೊರತರಲು ಲೇಖನ ಬರೆದುಕೊಟ್ಟ ಭಾರತ ಜ್ಞಾನ ವಿಜ್ಞಾನ ಸಮಿತಿಯ ಕಾರ್ಯದರ್ಶಿ ಸಿ.ಯತಿರಾಜು, ಚಿತ್ರ ರಚಿಸಿಕೊಟ್ಟ ಶ್ರೀ ಸುರೇಶ್ ಕಲ್ಲೂರ್, ಡಿ.ಟಿ.ಪಿ. ಮಾಡಿ ಕೊಟ್ಟ ಅಕ್ಷರ ವಿನ್ಯಾಸದವರಿಗೆ ಭಾರತ ಜ್ಞಾನ ವಿಜ್ಞಾನ ಸಮಿತಿ ಧನ್ಯವಾದಗಳನ್ನು ಸಲ್ಲಿಸುತ್ತದೆ.

ಭಾರತದ ಸ್ವಾತಂತ್ರ್ಯ ಸಂಗ್ರಾಮ ಆರಂಭವಾದದ್ದು ಯಾವಾಗ ಎಂಬ ಪ್ರಶ್ನೆಗೆ ಖಚಿತ ಉತ್ತರ ಹೇಳುವುದು ಸ್ವಲ್ಪ ಕಷ್ಟ. ಒಂದು ಅರ್ಥದಲ್ಲಿ ಅದು ಭಾರತ ಪರಕೀಯರ ದಾಸ್ಯಕ್ಕೆ ಗುರಿಯಾದ ಕ್ರಿಯೆಯ ಜೊತೆಯಲ್ಲಿಯೇ ಜನ್ಮ ತಳೆಯಿತು ಎಂದು ಹೇಳಬಹುದು. ಈ ಅರ್ಥದಲ್ಲಿ ಬ್ರಿಟಿಷರ ಆಕ್ರಮಣವನ್ನು ಒಂದಲ್ಲಾ ಒಂದು ಕಾರಣಕ್ಕಾಗಿ ವಿರೋಧಿಸುತ್ತಾ ಹೋರಾಡಿದ ಎಲ್ಲರನ್ನು, ಸ್ವಾತಂತ್ರಕ್ಕಾಗಿ ಹೋರಾಡಿದ ವೀರರೆಂದೇ ಪರಿಗಣಿಸಬೇಕಾಗುತ್ತದೆ ಹಾಗೂ ಸ್ವಾತಂತ್ರ ಹೋರಾಟ ಅಂದಿನಿಂದಲೇ ಆರಂಭವಾಯಿತೆಂದು ಭಾವಿಸಬೇಕಾಗುತ್ತದೆ.

ಈ ಅರ್ಥದಲ್ಲಿ ಬ್ರಿಟಿಷರ ಆಗಮನದ ನಂತರ ಅವರು ನೆಲೆಯೂರಲು ನಡೆಸಿದ ಪ್ರಯತ್ನ ಹಾಗೂ ಅವರು ಒಂದೊಂದಾಗಿ ದೇಶೀಯ ರಾಜ್ಯಗಳಲ್ಲಿ ಕಬಳಿಸುತ್ತಾ ಬಂದಂತೆಲ್ಲಾ ಅವರನ್ನು ವಿರೋಧಿಸಿದವರು; ಅವರು ನೆಲೆಯೂರದಂತೆ ತಡೆಯಲು ನಡೆಸಿದ ಎಲ್ಲಾ ಹೋರಾಟಗಳು; ಅವರ ಸಾಮ್ರಾಜ್ಯ ವಿಸ್ತರಣೆಗೆ ಪ್ರತಿರೋಧವೊಡ್ಡಿದ ಎಲ್ಲಾ ಅರಸರು ಸ್ವಾತಂತ್ರ್ಯ ಹೋರಾಟಗಾರರೇ. ಆದರೆ ಅವರು ತಮ್ಮ ತಮ್ಮ ರಾಜ್ಯಗಳ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರರು.

1757 ರ ಪ್ಲಾಸಿ ಕದನದ ನಂತರ ಬಹುಪಾಲು ಭಾರತ ಬ್ರಿಟಿಷರ ಸಂಪೂರ್ಣ ಗುಲಾಮಗಿರಿಗೆ ಒಳಗಾಯಿತು. ಹೀಗೆ ಪರಕೀಯರ ಕೈವಶವಾದ ಭಾರತದ ಆಳ್ವಿಕೆಯನ್ನು ಅವರಿಂದ ಕಸಿದುಕೊಳ್ಳಲು ಹಾಗೂ ತಮ್ಮ ಆಡಳಿತವನ್ನು ಮರುಸ್ಥಾಪಿಸಲು ನಡೆಸಿದ ಪ್ರಯತ್ನಗಳನ್ನು ನಿಜವಾದ ಸ್ವಾತಂತ್ರ್ಯ ಹೋರಾಟದ ಆರಂಭದ ಹೆಜ್ಜೆಗಳೆಂದು ಗುರುತಿಸಬಹುದು. ಈ ಆರಂಭದ ಹೆಜ್ಜೆಗಳು ಮೊದಲು ಮೂಡಿದ್ದು ಕರ್ನಾಟಕದ ನೆಲದಲ್ಲಿ ಎಂಬುದು ನಮಗೆಲ್ಲರಿಗೂ ಹೆಮ್ಮೆಯ ಸಂಗತಿ. 1760 ರಿಂದ 1800 ರವರೆಗೆ ಹೈದರ್ ಮತ್ತು ಅವನ ನಂತರ ಅವನ ಮಗನಾದ ಟಿಪ್ಪು ಸುಲ್ತಾನ್ ಬ್ರಿಟಿಷರನ್ನು ಭಾರತ ದೇಶದಿಂದಲೇ ಹೊರದೂಡುವ ಉದ್ದೇಶದಿಂದ



ಹೋರಾಡಿದ ಹೀಗೆ ಆಂಗ್ಲೋ ಮೈಸೂರು ಯುದ್ಧಗಳನ್ನು ಸ್ವಾತಂತ್ರ್ಯ ಹೋರಾಟದ ಅರುಣೋದಯದ ಹೋರಾಟಗಳೆಂದು ಪರಿಗಣಿಸಬಹುದು.

ಕಿತ್ತೂರಿನ ವೀರರಾಣಿ ಚೆನ್ನಮ್ಮ ಬ್ರಿಟಿಷರ ದತ್ತು ಮಕ್ಕಳಿಗೆ ಹಕ್ಕಿಲ್ಲ ಎಂಬ ನೀತಿಯ ವಿರುದ್ಧ ವೀರಾವೇಶದಿಂದ ಹೋರಾಡಿದರೂ ಅಕೆ 1824 ರಲ್ಲಿ ಬ್ರಿಟಿಷ್ ಕಮಿಷನರ್ ಆದ ಚಾಪ್ಲಿನ್‌ಗೆ ಸೋತು ಸೇರೆ ಸಿಕ್ಕಳು. ಈಕೆ ಆರಂಭಿಸಿದ ಹೋರಾಟವನ್ನು ಆಕೆಯ ಸಿಪಾಯಿಯಾಗಿದ್ದ ವೀರಸಂಗೊಳ್ಳಿರಾಯಣ್ಣ ಮುಂದುವರಿಸಿದ. ಈತ ತನ್ನದೇ ಆದ ಪುಟ್ಟ ಪಡೆಯೊಂದನ್ನು ಕಟ್ಟಿಕೊಂಡು ಗೆರಿಲ್ಲಾ ಮಾದರಿಯ ಯುದ್ಧವನ್ನು ಬ್ರಿಟಿಷರ ವಿರುದ್ಧ ಮುಂದುವರಿಸಿದ. ಸರ್ಕಾರಿ ಖಜಾನೆಗಳನ್ನ ಲೂಟಿ ಮಾಡಿ, ಸರ್ಕಾರಿ ದಫ್ತರ್‌ಗಳನ್ನ, ಅಂಚಿ ಕಚೇರಿಗಳನ್ನ ಸುಟ್ಟು ಬ್ರಿಟಿಷರನ್ನ ಕಂಗೆಡಿಸಿದ. ಮುಖಾಮುಖಿ ಯುದ್ಧದಲ್ಲಿ ರಾಯಣ್ಣನನ್ನು ಸೋಲಿಸಲಾಗದ ಬ್ರಿಟಿಷರು ಕುಟಿಲ ತಂತ್ರದ ಮೂಲಕ ಅವನ ವಿಶ್ವಾಸ ಘಾತಕ ಸ್ನೇಹಿತರ ನೆರವಿನಿಂದ ಅವನನ್ನು ಸೆರೆ ಹಿಡಿದು 1830 ರಲ್ಲಿ ಗಲ್ಲಿಗೇರಿಸಿದರು. 1819 ರಲ್ಲಿ ದಂಗೆಯೆದ್ದ ಕೊಪ್ಪಳದ ವೀರಪ್ಪನನ್ನು ಬ್ರಿಟಿಷ್ ಜನರಲ್ ಆದ ಪ್ರಿಟ್ಜಲ್ಲರ್ ಸೋಲಿಸಿ ಕೂಪ್ಪಳ ಹೋರಾಟವನ್ನ ಹೊಸಕಿ ಹಾಕಿದ. ಇದೇ ರೀತಿ 1824 ಸಿಂಧಗಿ ಬಂಡಾಯವನ್ನು ಉದಗೀರ್ ದೇಶ ಮುಖ್‌ರ ಬಂಡಾಯವನ್ನು ಚಿವುಟಿಹಾಕಲಾಯಿತು. 1833-34 ರಲ್ಲಿ ಕೊಡಗಿನ ಬಂಡಾಯವನ್ನು ಸಹ ಹೊಸಕಿ ಹಾಕಲಾಯಿತು. ಈ ಅರುಣೋದಯದ ಹೋರಾಟಗಳು ಮೈಸೂರು ಪ್ರಾಂತ್ಯ ಮತ್ತು ದಕ್ಷಿಣ ಭಾರತ ವಿವಿಧ ಪ್ರಾಂತ್ಯಗಳಲ್ಲಿ ತೀವ್ರವಾಗಿ ಬೆಳೆದು ಬಂದರೂ, ಭಾರತದ ವಿವಿಧ ಭಾಗಗಳಲ್ಲಿ ಅದರ ನೂರಾರು ಕಿಡಿಗಳನ್ನು ಗುರುತಿಸಬಹುದು. 1757 ರ ಪ್ಲಾಸಿ ಕದನದಿಂದ ಹಿಡಿದು 1857 ರ ಸಿಪಾಯಿ ದಂಗೆ ಎಂದು ಬ್ರಿಟಿಷರಿಂದ ಕರೆಯಲ್ಪಟ್ಟ ಭಾರತದ ಪ್ರಪ್ರಥಮ ಸ್ವಾತಂತ್ರ್ಯ ಸಂಗ್ರಾಮದವರೆಗಿನ ಒಂದು ಶತಮಾನದ ಅವಧಿಯಲ್ಲಿ ಜನಗಳ ಸಶಸ್ತ್ರ ದಂಗೆಯನ್ನು ಕಾಣದ ಒಂದೇ ಒಂದು ವರ್ಷವಿಲ್ಲ. ಪರಕೀಯರ ಆಳ್ವಿಕೆಯನ್ನು ವಿರೋಧಿಸುವ ಈ ಹೋರಾಟಗಳಲ್ಲಿ ಕೇವಲ ದೇಶಿಯ ಸಂಸ್ಥಾನಗಳ ರಾಜರುಗಳ ಮಾತ್ರ ಇರಲಿಲ್ಲ. ಬ್ರಿಟಿಷ್ ಆಳ್ವಿಕೆಯಿಂದ ತೊಂದರೆಗೊಳಗಾದ ಎಲ್ಲಾ ಜನವಿಭಾಗಗಳು ಈ ಹೋರಾಟದಲ್ಲಿ ಅತ್ಯಂತ ಸಕ್ರಿಯವಾಗಿ



ಪಾಲ್ಗೊಂಡಿದ್ದನ್ನು ನಾವು ಈ ಕಾಲ ಘಟ್ಟದಲ್ಲಿ ಕಾಣಬಹುದಾಗಿದೆ. ರೈತರು ಕೈ ಕಸುಬುದಾರರು, ಬುಡಕಟ್ಟು ಜನರು, ಸನ್ಯಾಸಿಗಳು, ಫಕೀರರು ಸೈನಿಕರು ಪಾಳೇಗಾರರು, ತಾಲ್ಲೋಕುದಾರರು ಮುಂತಾದ ಜನ ವಿಭಾಗಗಳು ಈ ಹೋರಾಟದಲ್ಲಿ ಭಾಗವಹಿಸಿರುವುದನ್ನು ನಾವು ಕಾಣುತ್ತೇವೆ. ಈ ರೀತಿಯ ಅನೇಕ ಹೋರಾಟಗಳಲ್ಲಿ ಈ ಕೆಳಕಂಡ ಹೋರಾಟಗಳನ್ನು ಪ್ರಮುಖವಾಗಿ ಉಲ್ಲೇಖಿಸಬಹುದಾಗಿದೆ.

**ಸನ್ಯಾಸಿ ಫಕೀರ್ ಬಂಡಾಯ**

ಭವಾನಿ ಪಾಠಕ್, ದೇವಿ ಚೌದುರಾಣಿ, ಮಜ್ನು ಶಹಾ, ಚಿರಾಗ್ ಶಾಹ ಮುಂತಾದವರ ನೇತೃತ್ವದಲ್ಲಿ ಬಿಹಾರ, ಉತ್ತರ ಬಂಗಾಳ ಹಾಗೂ ಢಾಕಾ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಸನ್ಯಾಸಿಗಳು ಮತ್ತು ಫಕೀರರ ಬಂಡೆದ್ದರು. ಇವರು ರೈತರು, ಕಸುಬುದಾರರು ಪಾಳೆಗಾರರ ಸೈನಿಕರು ಬ್ರಿಟಿಷರ ವಿರುದ್ಧ ಧಂಗೆಯೇಳುವಂತೆ ಮಾಡಿದರು. ಇವರ ಬಂಡಾಯವನ್ನು ಹತ್ತಿಕ್ಕಲು ಬ್ರಿಟಿಷ್ ಸರ್ಕಾರ ಸನ್ಯಾಸಿಗಳು ಮತ್ತು ಫಕೀರರು ಸಣ್ಣ ಗುಂಪುಗಳಲ್ಲಿ ಓಡಾಡುವುದನ್ನು ನಿಷೇದಿಸಿದರು.

**ರಂಗಾಪುರದ ರೈತ ಬಂಡಾಯ**

ಬ್ರಿಟಿಷ್ ಕಲೆಕ್ಟರ್ ಗುಡ್ ಲ್ಯಾಂಡ್ ನೇಮಿಸಿದ ಇಜಾರದಾರ ದೇಬೀ ಸಿನ್ಹಾನ ದಮನದ ವಿರುದ್ಧ ಜನವರಿ ಫಬ್ರವರಿ 1783 ರಲ್ಲಿ ರೈತರು ದಂಗೆಯೆದ್ದು ಆತನ ಮನೆಯನ್ನು ಮುತ್ತಿದರು. ಅವನು ಹಿಂದಿನ ಬಾಗಿಲಿನಿಂದ ತಪ್ಪಿಸಿಕೊಂಡ. ದಿರ್ಜಿ ನಾರಾಯಣ್, ನೂರಾಲುದ್ದೀನ್, ಇಸ್ರೇಲ್ ಖಾನ್‌ಸರ್ಕಾರ್ ಮುಂತಾದವರು ನೇತೃತ್ವ ನೀಡಿದ ಈ ಬಂಡಾಯವನ್ನು ಬ್ರಿಟಿಷರು ಬಗ್ಗು ಬಡಿದು ನೂರಾರು ಜನರನ್ನು ಗಲ್ಲಿಗೇರಿಸಿದರು. ಹಿಂದೂಗಳು ಮತ್ತು ಮುಸಲ್ಮಾನರು ಜೊತೆಗೂಡಿ ಹೋರಾಡಿದ್ದು ಈ ಬಂಡಾಯದ ವಿಶೇಷವಾಗಿತ್ತು.

**ಬಾಬಾ ತಿಲ್ಕಾ ಮಾಝೀಯ ನೇತೃತ್ವದ ಬಂಡಾಯಃ**

ಬ್ರಿಟಿಷರು ಜಾರಿಗೆ ತಂದ ಅನೇಕ ಶಾಸನಗಳು ಬುಡಕಟ್ಟು ಜನಗಳ ಸಾಂಪ್ರದಾಯಿಕ ಹಕ್ಕುಗಳನ್ನು ಕಸಿದು ಕೊಂಡಾಗ ಅವರು ಬ್ರಿಟಿಷರವಿರುದ್ಧ ಬಂಡೆದ್ದರು. ಸಂತಾಲರ ನಾಯಕನಾದ



ಬಾಬಾ ತಿಲ್ಕಮಾಝಿ 1784-85 ರಲ್ಲಿ ಬಂಡಾಯವೆದ್ದು ಬಿಲ್ಲು ಬಾಣದಿಂದಲೇ ಭಾಗಲ್ಪುರದ ಬ್ರಿಟಿಷ್ ಕಲೆಕ್ಟರ್‌ನನ್ನ ಕೊಂದು ಹಾಕಿದ. ಇದರಿಂದ ರೊಚ್ಚಿಗೆದ್ದ ಬ್ರಿಟಿಷರು ದೊಡ್ಡ ಸೇನೆಯೊಂದಿಗೆ ಬಂದು ಇವನನ್ನು ಸೆರೆ ಹಿಡಿದು ಅಮಾನುಷವಾಗಿ ಕೊಂದು ಸೇಡು ತೀರಿಸಿಕೊಂಡರು.

### ತಿರುನಲ್ವೇಲಿಯ ವೀರ ಪಾಂಡ್ಯ ಕಟ್ಟಬೊಮ್ಮನ್ ಬಂಡಾಯ



ತಿರುನಲ್ವೇಲಿಯ ಪಾಳೆಯಗಾರ 1799 ರಲ್ಲಿ ಬ್ರಿಟಿಷ್ ವಿರುದ್ಧ ಬಂಡೆದ್ದು ವೀರಾವೇಶದಿಂದ ಹೋರಾಡಿದರೂ ವಿಶ್ವಾಸಘಾತುಕರ ದ್ರೋಹದಿಂದ ಸೆರೆ ಸಿಕ್ಕ ನಂತರ ಈತನನ್ನು ಗಲ್ಲಿಗೇರಿಸಲಾಯಿತು. ಈ ಬಂಡಾಯದಲ್ಲಿ ಭಾಗವಹಿಸಿದ ಬಹಳಷ್ಟು ಜನ ರೈತರು ಸೈನಿಕರು 1806 ರಲ್ಲಿ ವೆಲ್ಲೂರು ಕೋಟೆಯ ಮೇಲೆ ಧಾಳಿಮಾಡಿ ಶಸ್ತ್ರಾಗಾರವನ್ನು ವಶಪಡಿಸಿಕೊಂಡದ್ದೇ ಅಲ್ಲದೆ ಬ್ರಿಟಿಷ್ ಸೇನಾಪಡೆಯ 69 ನೆ ರೆಜಿಮೆಂಟಿನ ಅರ್ಧದಷ್ಟು ಸೈನಿಕರನ್ನು ಕೊಂದರು. ಆರ್ಕಾಟಿನ ದೊಡ್ಡ ಸೇನೆಯ ಸಹಾಯದಿಂದ ವೆಲ್ಲೂರು ಕೋಟೆಯನ್ನು ಬ್ರಿಟಿಷರು ಮರು ವಶಪಡಿಸಿಕೊಂಡರು.



ತಿರುವಾಂಕೂರಿನ ದಿವಾನ **ವೇಲು ಥಂಪಿ** ಅಲ್ಲಿಯ ಜನತೆಯ ಬಂಡಾಯಕ್ಕೆ ನಾಯಕತ್ವ ನೀಡಿ ತಿರುವನಂತಪುರವನ್ನು ದೀರ್ಘಕಾಲ ಬ್ರಿಟಿಷರು ವಶಪಡಿಸಿ ಕೊಳ್ಳಲಾಗದಂತೆ ತಡೆಯುವಲ್ಲಿ ಯಶಸ್ವಿಯಾದ.

### ವಹಾಬಿ ದಂಗೆ



ಪಾಳೆಯಗಾರಿಕೆ ವಿರೋಧಿ ಹಾಗೂ ಸಮಾನತೆಯ ಆಯಾಮ ಹೊಂದಿದ್ದ ಬ್ರಿಟಿಷ್ ವಿರೋಧಿಯಾದ ವಹಾಬಿ ದಂಗೆಗೆ ನೇತೃತ್ವ

ನೀಡಿದವನು ತಿತುಮೀರ್. ಈತ ಬ್ರಿಟಿಶರೊಂದಿಗೆ ಹೋರಾಡುತ್ತಾ 1831 ರಲ್ಲಿ ಮರಣಿಸಿದ. ಈ ಬಂಡಾಯದಲ್ಲಿ ಪಾಲ್ಗೊಂಡ ಈತನ ಸೋದರಳಿಯನನ್ನು ಗಲ್ಲಿಗೇರಿಸಿ, 350 ಕ್ಕೂ ಹೆಚ್ಚು ಜನರನ್ನು ಗಡಿಪಾರು ಮಾಡಲಾಯಿತು.

**ಫರಾಝಿ ಆಂದೋಲನ:**

ಭೂಮಿ ಅಲ್ಲಾನಿಗೆ ಸೇರಿದ್ದು ಆದ್ದರಿಂದ ಅದನ್ನು ಖಾಸಗಿಯಾಗಿ ತಲಾತಲಾಂತರಕ್ಕೆ ಪಡೆಯುವುದು ಧರ್ಮದ್ರೋಹವೆಂದು ಪ್ರತಿಪಾದಿಸಿದ ಫರೀದ್‌ಪುರದ ಬಡ ಮುಸ್ಲಿಂ ದೂದುಮಿಯಾ ಬ್ರಿಟಿಷ್ ಆಳರಸರು, ಪ್ಲಾಂಟರುಗಳು ಹಾಗೂ ಜಮೀನ್ದಾರರ ವಿರುದ್ಧ ಬಂಡೇಳಲು ಕರೆ ನೀಡಿದ ದೂದುಮಿಯಾನ ಈ ಫರಾಝಿ ಆಂದೋಳನದಲ್ಲಿ ಅಪಾರ ಸಂಖ್ಯೆಯ ಮುಸ್ಲಿಂ ಬಡ ರೈತರು, ಕಸುಬುದಾರರೇ ಅಲ್ಲದೆ ಹಿಂದೂ ರೈತರು, ಕಸುಬುದಾರರು ಪ್ಲಾಂಟರುಗಳ ಹಾಗೂ ಜಮೀನ್ದಾರರ ಬಾಡಿಗೆ ಭಂಟರ ವಿರುದ್ಧ ಹೋರಾಡಿದರು. 1856 ರಲ್ಲಿ ದೂದುಮಿಯಾನನ್ನು ಸೆರೆಹಿಡಿದು ಫರಾಝಿ ಆಂದೋಳನವನ್ನು ಹತ್ತಿಕ್ಕಲಾಯಿತು.

**ಭಾಯಿ ಮಹಾರಾಜಾಸಿಂಗ್‌ನ ಬಂಡಾಯ**

ಪಂಜಾಬಿನ ಸಂತ ಯೋಧನಾದ ಬಾಯಿಮಹಾ ರಾಜ್ ಸಿಂಗ್ ರಜಪೂತರು ಹಾಗೂ ಪಠಾಣರೊಡಗೂಡಿ ಬ್ರಿಟಿಷರ ಪ್ರಾಬಲ್ಯಕ್ಕೆ ಎಂಟು ವರ್ಷಗಳ ಕಾಲ ತಡೆಯೊಡ್ಡಿದ್ದ, ದೀರ್ಘಕಾಲದ ಹೋರಾಟದ ನಂತರ ಸೆರೆ ಸಿಕ್ಕ ಈತನನ್ನು ಸಿಂಗಾಪುರದ ಜೈಲಿಗೆ ಕಳುಹಿಸಲಾಯಿತು. ಆತ ಅಲ್ಲಿಯೇ ಕೈದಿಯಾಗಿ ಮರಣವನ್ನಪ್ಪಿದ.

**1855-56ರ ಸಂತಾಲರ ಬಂಡಾಯ**

ಸಿಧೂ ಮತ್ತು ಕಾನು 1855 ರಲ್ಲಿ ಸಹಸ್ರಾರು ಸಂತಾಲರ ಸಭೆ ನಡೆಸಿ ಜಮೀನ್ದಾರರು ಹಾಗೂ ಲೇವಾ ದೇವಿಗಾರರ ಶೋಷಣೆಯ ವಿರುದ್ಧ ಹೋರಾಡಲು ಕರೆ ನೀಡಿದರು. ಕಮ್ಮಾರರು, ಕುಂಬಾರರು, ಚಮ್ಮಾರರು, ಗಾಣಿಗರು ಮುಂತಾದ ಕುಶಲಕರ್ಮಿಗಳು ಈ ಬಂಡಾಯದ ಬೆಂಬಲಕ್ಕೆ ನಿಂತರು. ಕಲ್ಕತ್ತೆಯತ್ತ ಮುಂದುವರಿದ ಸಂತಾಲರ ಬಂಡಾಯದ



ಧಾಳಿಯಿಂದ ಬ್ರಿಟಿಷರು ತತ್ತರಿಸಿ ಹೋದರು. ಬ್ರಿಟಿಷರು ಅತ್ಯಂತ ಅಮಾನುಷವಾಗಿ ಈ ಬುಡಕಟ್ಟು ಜನರ ಬಂಡಾಯವನ್ನು ಹೊಸಕಿ ಹಾಕಿದರು. ಸುಮಾರು 15-20 ಸಾವಿರ ಮಂದಿ ಈ ಬಂಡಾಯದಲ್ಲಿ ಹತರಾದರು.

**ಭಾರತೀಯ ಸಿಪಾಯಿಗಳ ಅಸಮಾಧಾನದ ಹೊಗೆ**

ಜನವರಿ 1857ರ ಬೆಳಗಿನ ಒಂದು ದಿನ. ಕಲ್ಕತ್ತಾದ ಉತ್ತರಕ್ಕೆ 5 ಕಿ.ಮಿ. ದೂರದಲ್ಲಿರುವ ಡಂ ಡಂ ಬ್ರಿಟಿಷ್ ಸೈನಿಕ ನೆಲೆಯಲ್ಲಿ ಒಬ್ಬ ಬ್ರಾಹ್ಮಣ ಸಿಪಾಯಿ ತನ್ನ ಅಡಿಗೆ ತಪ್ಪಲೆಯನ್ನು ಶುದ್ಧ ಮಾಡಿ, ನೀರು ತುಂಬಿಕೊಂಡು ತಾನು ಅಡಿಗೆ ತಯಾರಿಸಿಕೊಳ್ಳಲು ಆತುರಾತುರವಾಗಿ ನಡೆದು ಬರುತ್ತಿದ್ದ. ಅವನ ದಾರಿಯಲ್ಲಿ ಡಂಡಂ ಶಸ್ತ್ರ ಕೋಠಿಯಲ್ಲಿ ಕೆಲಸ ಮಾಡುತ್ತಿದ್ದ ಖಲಾಸಿಯೊಬ್ಬ ಅವನನ್ನು ತಡೆದು ಕುಡಿಯಲು ನೀರು ಕೊಡೆಂದು ಕೇಳಿದ. ಕೆಳಜಾತಿಗೆ ಸೇರಿದ ಖಲಾಸಿಯೊಬ್ಬ ತನ್ನ ಅಡಿಗೆಗಾಗಿ ಶುದ್ಧ ಮಾಡಿದ ಪಾತ್ರೆಯನ್ನು ಮುಟ್ಟಿ ನೀರು ಕುಡಿದು ಅಪವಿತ್ರಗೊಳಿಸಿಬಿಡುತ್ತಾನೆ ಎಂದು ಅವನನ್ನು “ದರಿದ್ರ ಮುಂಡೆದೇ ನೀನು ನನ್ನ ಪಾತ್ರೆಯನ್ನು ಮುಟ್ಟಿ ಮೈಲಿಗೆ ಮಾಡಿ ನನ್ನ ಜಾತಿ ಕೆಡಿಸ್ಬೇಡ. ದೂರ ಸರಿ” ಎಂದು ಗದರಿಸಿದ. ಬ್ರಾಹ್ಮಣ ಸಿಪಾಯಿಯ ಈ ನಡೆಮುಡಿಯನ್ನು ಕಂಡು ಖಲಾಸಿ ವ್ಯಂಗ್ಯವಾಗಿ “ಲೇ ಬ್ರಾಹ್ಮಣ ಪಿಳ್ಳೆ. ನಿನ್ನ ಜಾತಿ ಡೌಲು ನನ್ನಂತಹವರ ಮುಂದೆ ಮಾತ್ರ ತೋರ್ಸು. ನಿಮ್ಮ ಜಾತಿ ಡೌಲಿಗೆ ಫಿರಂಗಿಯೋರು ಸರಿಯಾಗಿ ಮಾಡ್ತಾರೆ. ಸ್ವಲ್ಪ ತಾಳು. ದನ, ಹಂದಿ ಕೊಬ್ಬಿನಲ್ಲಿ ನೆನಸಿರೋ ಕಾಡತೂಸುಗಳನ್ನು ನಿಮ್ಮ ಬಾಯಿಂದ ಕಡಿಯೋ ಹಾಗೆ ಮಾಡ್ತಾರೆ. ಆವಾಗ ನಿಮ್ಮ ಜಾತಿ ಎಲ್ಲಿರ್ತದೋ ನಾನು ನೋಡ್ತೀನಿ ಹೋಗಲೇ” ಎನ್ನುತ್ತಾ ನಡೆದ. ಶಸ್ತ್ರ ಕೋಠಿಯ ಖಲಾಸಿಯ ಈ ಮಾತುಗಳು ಬ್ರಾಹ್ಮಣ ಸಿಪಾಯಿಯ ಕಿವಿಯಲ್ಲಿ ಪದೇ ಪದೇ ಪ್ರತಿಧ್ವನಿಸಿ ಅವನನ್ನು ಚಿಂತೆಗೀಡು ಮಾಡಿದವು. ಬ್ರಿಟಿಷ್ ಸೈನಿಕ ಹುದ್ದೆಯು ಕೈ ತುಂಬ ಸಂಬಳ ಮತ್ತು ಗೌರವವನ್ನು ನೀಡುತ್ತಿದ್ದರೂ ಜಾತಿ ಭ್ರಷ್ಟನಾಗುವೆನೆಂಬ ಭಯ ನಿಧಾನವಾಗಿ ಅವನನ್ನಾವರಿಸಿಕೊಳ್ಳಲಾರಂಭಿಸಿತು. ತನ್ನ ಹೃದಯದ ಆತಂಕವನ್ನು ಕಡಿಮೆ ಮಾಡಿಕೊಳ್ಳಲು ಗೆಳೆಯ ಸೈನಿಕರಿಗೆ ಈ ವಿಚಾರವನ್ನು ಹರಡಿದನು. ಹೀಗೆ ಬ್ರಿಟಿಷರು ಹಳೇ ಮಾದರಿಯ



ಕಾಡತೂಸಗಳಿಗೆ ಬದಲಾಗಿ ಹಂದಿ ಹಾಗೂ ದನದ ಕೊಬ್ಬಿನಲ್ಲಿ ನೆನೆಸಿದ ಕಾಡತೂಸುಗಳನ್ನು ಬಳಸುವಂತೆ ಮಾಡುವುದರ ಮೂಲಕ ತಮ್ಮ ಜಾತಿ ಭ್ರಷ್ಟಗೊಳಿಸಲಿದ್ದಾರೆಂಬ ಆತಂಕ ವ್ಯಾಪಕವಾಗಿ ಸಿಪಾಯಿಗಳಲ್ಲಿ ಕಾಡ್ಗಿಚ್ಚಿನಂತೆ ಹರಡಿತು. ಈ ಸುದ್ದಿಯಿಂದ ಆತಂಕಗೊಂಡವರು ಮೇಲ್ಜಾತಿಯ ಬ್ರಾಹ್ಮಣರು ಮಾತ್ರವಾಗಿರಲಿಲ್ಲ. ಹಂದಿಯ ಕೊಬ್ಬಿನಲ್ಲಿ ನೆನೆಸಿದ ಕಾಡತೂಸುಗಳನ್ನು ಬಾಯಿಂದ ಕಚ್ಚಿಸಿ ಇಸ್ಲಾಂ ಧರ್ಮೀಯರಾದ ನಮ್ಮನ್ನೂ ಕಾಫೀರ್‌ಗಳನ್ನಾಗಿ ಮಾಡಲಿದ್ದಾರೆಂಬ ಆತಂಕ ಮುಸಲ್ಮಾನ್ ಸಿಪಾಯಿಗಳಲ್ಲೂ ಹರಡಲಾರಂಭಿಸಿತು. ಇದರಿಂದ ತಾವು ಅಪವಿತ್ರರಾಗುವುದು ಮಾತ್ರವಲ್ಲ ಜಾತಿ ಭ್ರಷ್ಟರಾಗಿ ಬಹಿಷ್ಕಾರಕ್ಕೆ ಗುರಿಯಾಗಬೇಕಾಗುತ್ತದೆಂಬ ಆತಂಕ ಅವರೆಲ್ಲರನ್ನೂ ಸಮಾನವಾಗಿ ಆವರಿಸಿಕೊಂಡಿತು. ಈ ಸುದ್ದಿ ಶೀಘ್ರವಾಗಿ 15 ಮೈಲಿ ದೂರದಲ್ಲಿದ್ದ ಬ್ಯಾರಕ್‌ಪುರ್ ಸೈನಿಕ ನೆಲೆಯಲ್ಲೂ ವ್ಯಾಪಕವಾಗಿ ಹರಡಿತು. ಇಂತಹ ಅಪಾಯಕಾರಿ ಸುದ್ದಿಹರಡಿ ಸೈನಿಕರಲ್ಲಿ ಮಾನಸಿಕ ಅಲ್ಲೋಲಕಲ್ಲೋಲವನ್ನುಂಟು ಮಾಡಿದರೂ ಬ್ರಿಟಿಷರು ಅವರ ಧಾರ್ಮಿಕ ಸೂಕ್ಷ್ಮ ಭಾವನೆಗಳಿಗೆ ಕವಡೆಕಾಸಿನ ಬೆಲೆಯನ್ನೂ ಕೊಡಲಿಲ್ಲ. ಭಾರತೀಯ ಸಿಪಾಯಿಗಳಿರುವುದೇ ನಮ್ಮ ಆದೇಶಗಳನ್ನು ಕಣ್ಮುಚ್ಚಿ ಪಾಲಿಸುವುದಕ್ಕೆ, ಅವರಿಗೆ ನೋವಾದರೂ ಅವರು ಇದನ್ನು ಅತ್ಯಂತ ಶಿಸ್ತಿನಿಂದ ಸಹಿಸಿಕೊಳ್ಳಬೇಕೆಂದು ಬ್ರಿಟಿಷರು ನಿರೀಕ್ಷಿಸಿ ಸುಮ್ಮನಾದರು. ಭಾರತೀಯ ಸೈನಿಕರ ಈ ಧಾರ್ಮಿಕ ಆತಂಕವನ್ನು ತೊಡೆದು ಹಾಕಲಾಗಲಿ ಅಥವಾ ಕಡಿಮೆ ಮಾಡಲಾಗಲಿ ಅವರು ಸ್ವಲ್ಪವೂ ಪ್ರಯತ್ನಿಸಲಿಲ್ಲ. ಇದರಿಂದ ಭಾರತೀಯ ಸಿಪಾಯಿಗಳಲ್ಲಿ ಬ್ರಿಟಿಷರು ಉದ್ದೇಶಪೂರ್ವಕವಾಗಿಯೇ ನಮ್ಮ ಜಾತಿ ಕೆಡಿಸಿ ಅಪವಿತ್ರಗೊಳಿಸಿ ಮತಾಂತರ ಮಾಡಲು ಈ ಸಂಚನ್ನು ಹೂಡಿದ್ದಾರೆಂಬ ಭಾವನೆ ಬಲವಾಗಿ ಬೆಳೆಯಲು ಕಾರಣವಾಯಿತು.

ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಭಾರತೀಯ ಸೈನಿಕರಿಗೂ ಬ್ರಿಟಿಷ್ ಸೈನಿಕರಿಗೂ ವೇತನದಲ್ಲಿ ಅಪಾರ ವ್ಯತ್ಯಾಸಗಳಿದ್ದವು. ಸಮಾನವಾದ ಹುದ್ದೆಗಳಲ್ಲೂ ಬ್ರಿಟಿಷ್ ಮತ್ತು ಭಾರತೀಯ ಸಿಪಾಯಿಗಳ ನಡುವೆ ಅಪಾರ ಅಂತರವಿರುತ್ತಿತ್ತು. ಸೈನಿಕ ಸೌಲಭ್ಯಗಳಲ್ಲೂ ಅಜಗಜಾಂತರ ವ್ಯತ್ಯಾಸಗಳಿದ್ದವು. ಇದು ಸಾಲದೆಂಬಂತೆ ಭಾರತೀಯ ಸಿಪಾಯಿಗಳು ಎಷ್ಟೇ ನಿಷ್ಠೆಯಿಂದ ರಣರಂಗದಲ್ಲಿ ಹೋರಾಡಿ ತಮ್ಮ ಶೌರ್ಯ ಸಾಹಸಗಳನ್ನು ಮೆರೆದರೂ ಬಡ್ತಿ ನೀಡುವಾಗ



ಅವುಗಳನ್ನು ಪರಿಗಣಿಸದೇ ಮಲತಾಯಿ ಧೋರಣೆ ಅನುಸರಿಸಲಾಗುತ್ತಿತ್ತು. ಅಸಮರ್ಥ ಬ್ರಿಟಿಷರು ಉನ್ನತ ಸೈನಿಕ ಹುದ್ದೆಗಳಿಗೆ ಬಡ್ತಿ ಹೊಂದಿ ಭಾರತೀಯ ಸಮರ್ಥ ಸಿಪಾಯಿಗಳ ಹೊಟ್ಟೆ ಉರಿಸುತ್ತಿದ್ದರು. ಈ ಎಲ್ಲಾ ಅಸಮಾಧಾನ, ಅವಮಾನಗಳನ್ನು ನುಂಗಿಕೊಂಡು ಕಾಲ ತಳ್ಳುತ್ತಿದ್ದ ಭಾರತೀಯ ಸಿಪಾಯಿಗಳ ಅಸಮದಾನದ ಕೆಂಡಕ್ಕೆ, ಬ್ರಿಟಿಷರ ಈ ಹೊಸ ಪದ್ಧತಿ ತೀವ್ರ ಎಣ್ಣೆ ಸುರಿಸಿತು. ಮತಾಂತರ ಮಾಡಲು ಬ್ರಿಟಿಷರು ಉದ್ದೇಶಪೂರ್ವಕವಾಗಿಯೇ ಈ ಸಂಚುಗಳನ್ನು ನಮ್ಮ ಮೇಲೆ ಪ್ರಯೋಗಿಸುತ್ತಿದ್ದಾರೆಂಬ ಭಾವನೆ ಅವರಲ್ಲಿ ಮೂಡಿ ಹೆಮ್ಮರವಾಯಿತು. ಕಲ್ಕತ್ತಾಕ್ಕೆ ಮಾತ್ರ ಸೀಮಿತವಾಗಿದ್ದ ಈ ಭಾವನೆ ಕ್ರಮೇಣ ವ್ಯಾಪಕವಾಗಿ ಭಾರತೀಯ ಸೈನ್ಯದಲ್ಲೆಲ್ಲಾ ಹರಡಿತು. ಈ ಸುದ್ದಿಗಳಿಂದ ಧಾರ್ಮಿಕ ಆಘಾತಕ್ಕೊಳಗಾದ ಬ್ಯಾರಕ್‌ಪುರ್ ಮತ್ತು ರಾಣಿಗಂಜ್‌ನಲ್ಲಿನ ಸೇನಾ ಪಡೆಗಳ ಭಾರತೀಯ ಸಿಪಾಯಿಗಳು ಸಾರ್ವಜನಿಕ ಕಟ್ಟಡಗಳಿಗೆ ಸೈನ್ಯಾಧಿಕಾರಿಗಳ ಬಂಗಲೆಗಳಿಗೆ ಬೆಂಕಿ ಹಚ್ಚಿ ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿದ್ದರು. ಬ್ಯಾರಕ್‌ಪುರ್‌ನ 34ನೇ ಎನ್.ಐ. ತುಕಡಿಯಲ್ಲಿ ಇಂತಹ ಉದ್ರೇಕಕಾರಿ ಚಟುವಟಿಕೆಗಳಲ್ಲಿ ತೊಡಗಿದ್ದ ಸೈನಿಕರು ಹೆಚ್ಚಿನ ಸಂಖ್ಯೆಯಲ್ಲಿದ್ದರು. 19ನೇ ಎನ್.ಐ. ತುಕಡಿಯ ಸೈನಿಕರು ಕಾಡತೂಸಿನ ತಾಮ್ರದ ಮುಚ್ಚಳಿಕೆಗಳನ್ನು ತೆಗೆದುಕೊಂಡು ಕವಾಯತು ನಡೆಸಲು ನಿರಾಕರಿಸಿದರು. ಕಮ್ಯಾಂಡಿಂಗ್ ಅಧಿಕಾರಿಯಾದ ಮಿಚೆಲ್ ಕೋಪಗೊಂಡು ಅವರುಗಳನ್ನು ಹೀನಾಮಾನವಾಗಿ ಬಯ್ದು. ಮಧ್ಯರಾತ್ರಿಯ ವೇಳೆಗೆ ಇಡೀಸೈನಿಕ ತುಕಡಿ ಒಗ್ಗೂಡಿಕೊಂಡು ಬಂದೂಕಗಳಿಗೆ ಮದ್ದು ತುಂಬಿಕೊಂಡು ಉದ್ರೇಕಕಾರಿಯಾಗಿ ಘೋಷಣೆ ಹಾಕುತ್ತಾ ಇಡೀ ರಾತ್ರಿ ಬ್ರಿಟಿಷ್ ಅಧಿಕಾರಿಗಳಿಗೆ ಆತಂಕವನ್ನುಂಟುಮಾಡಿದರು. ಆದರೂ ಬೆಳಗಿನ ಹೊತ್ತಿಗೆ ಅವರ ರೋಷ ಆವೇಶಗಳು ತಣ್ಣಗಾಗಿ ಬೆಳಗಿನ ಕವಾಯತಿಗೆ ಅವರೆಲ್ಲಾ ಶಿಸ್ತಿನಿಂದ ಹಾಜರಾಗಿ ಮೊದಲಿನಂತೆ ಬ್ರಿಟಿಷ್ ಅಧಿಕಾರಿಗಳ ಆಜ್ಞೆಯನ್ನು ಪಾಲಿಸಲಾರಂಭಿಸಿದರು. ಸರಕಾರ ನ್ಯಾಯಿಕ ವಿಚಾರಣೆ ನಡೆಸಿ ಈ ಗಲಾಟೆಯನ್ನು ಸ್ಥಳೀಯ ಘಟನೆಯೆಂದು ಪರಿಗಣಿಸಲು ಶಿಫಾರಸ್ಸು ಮಾಡಿತು. ಗೌವರ್ನರ್ ಜನರಲ್ 19ನೇ ತುಕಡಿಯನ್ನು ವಿಸರ್ಜಿಸಲು ತೀರ್ಮಾನಿಸಿದನು.



19ನೇ ತುಕಡಿಯ ಸೈನಿಕರು ತಮ್ಮ ಧರ್ಮ ಪಾವಿತ್ರ್ಯತೆಯ ರಕ್ಷಣೆಗೋಸ್ಕರ ಬಂಡೆದ್ದು ತಮ್ಮ ಹುದ್ದೆಗಳನ್ನೇ ಬಲಿಯಾಗಿ ನೀಡಿ ಹೊರಬಿದ್ದ ಸಿಪಾಯಿಗಳು ಹೊರಗೆ ಬಂದು ತಮ್ಮ ನಿಲುವನ್ನು ಸಮರ್ಥಿಸಿಕೊಂಡು ಒಂದು ರೀತಿಯ ಪ್ರಚಾರವನ್ನೇ ಕೈಗೊಂಡರು. ಈ ಪ್ರಚಾರದಿಂದಾಗಿ ಬ್ರಿಟಿಷರ ಸೇವೆಯಲ್ಲುಳಿದ ಸೈನಿಕರಿಗೆ ಮುಜುಗರವುಂಟಾಯಿತು. ವೇತನ, ಬಡ್ತಿಗಳ ಆಸೆಗಾಗಿ ಧಾರ್ಮಿಕ ಕಟ್ಟು ಕಟ್ಟಳೆಗಳನ್ನು ಗಾಳಿಗೆ ತೂರಿ ಧರ್ಮ ಲಂಪಟರಾಗಿ, ಜೀವನ ಸಾಗಿಸುವ ಹೀನ ಬದುಕನ್ನು ಸಾಗಿಸುತ್ತಿದ್ದೇವೆ ಎಂಬ ಕಳಂಕ ಭಾವನೆ ಅವರಲ್ಲಿ ಮೂಡಿತು. ಇದಲ್ಲದೆ 19ನೇ ತುಕಡಿಯ ಸೈನಿಕರು ತಮ್ಮ ಧರ್ಮದ ರಕ್ಷಣೆಗಾಗಿ ಬಂಡೆದ್ದಾಗ ಅವರ ಬೆಂಬಲಕ್ಕೆನಿಲ್ಲದೆ ಅವರನ್ನು ಸೈನ್ಯದಿಂದ ಹೊರತಳ್ಳುವ ಪಾಪದಲ್ಲಿ ತಾವೂ ಪರೋಕ್ಷವಾಗಿ ಪಾಲ್ಗೊಂಡಿದ್ದೇವೆಂಬ ಪಾಪ ಪ್ರಜ್ಞೆ ಅವರನ್ನು ಕಾಡಲಾರಂಭಿಸಿತು. ಹೀಗೆ ಭಾರತೀಯ ಸಿಪಾಯಿಗಳು ಸೈನ್ಯದ ಶಿಸ್ತು ಭಂಗ ಮಾಡಿ ಶಿಕ್ಷೆಗೆ ಗುರಿಯಾಗುವ ಇಲ್ಲವೆ ಧರ್ಮ ಲಂಪಟರಾಗಿ ಪಾಪ ಮಾಡಿ ಪರಲೋಕದಲ್ಲಿ ಶಿಕ್ಷೆಗೆ ಗುರಿಯಾಗುವ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ತೊಳಲಾಡಲಾರಂಭಿಸಿದರು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ವ್ಯಾಕುಲಕ್ಕೊಳಗಾದ ತುಕಡಿಗಳಲ್ಲಿ 34ನೇ ಎನ್.ಐ. ತುಕಡಿ ಬಹಳ ಮುಖ್ಯವಾದದ್ದು. ಒಳಗೊಳಗೆ ಕುದಿದ ದಾವಾನಲ ಆಸ್ಫೋಟನೆಗೊಳ್ಳಲು ಮತ್ತೊಂದು ಅವಕಾಶಕ್ಕೆ ಕಾಯುತ್ತಿತ್ತು. ಈ ಆಸ್ಫೋಟ 34ನೇ ಎನ್.ಐ. ತುಕಡಿಯಲ್ಲಿ 29ನೇ ಮಾರ್ಚ್ 1857ರಲ್ಲಿ ಆಸ್ಫೋಟಿಸಿತು.

### ಮಂಗಲ ಪಾಂಡೆಯ ಬಲಿದಾನ

ಮಂಗಲ ಪಾಂಡೇ ಎಂಬ ಸಿಪಾಯಿ ಬ್ರಿಟಿಷರ ಈ ಆರ್ಥಿಕ ಮತ್ತು ದಾರ್ಮಿಕ ದೌರ್ಜನ್ಯಗಳನ್ನು ಏಕಾಂಗಿಯಾಗಿ ಪ್ರತಿಬಟಿಸಲು ತೀರ್ಮಾನಿಸಿದ. ಸೈನಿಕ ತುಕಡಿಯ ಕ್ವಾಟರ್‌ಗಾರ್ಡ್ ಮುಂದೆ ಬಂದು ಅವನನ್ನು ಕೊಲ್ಲಲು ಗುಂಡು ಹಾರಿಸಿದ. ಲೆಫ್ಟಿನೆಂಟ್ ಭಾಗ್ ಕುದುರೆಯನ್ನೇರಿ ಬರುತ್ತಿರುವುದನ್ನು ಗಮನಿಸಿ ಆ ಕಡೆಗೂ ಗುಂಡು ಹಾರಿಸಿದ. ಈ ಧಾಳಿಯಿಂದ ಗಾಯಗೊಂಡ ಕುದುರೆ ಕೆಳಗುರುಳಿತು. ಮಂಗಳ ಪಾಂಡೇ ಮತ್ತೆ ಗುಂಡು ಹಾರಿಸಲು ಪ್ರಯತ್ನಿಸುತ್ತಿರುವುದನ್ನು ಗಮನಿಸಿ ಅವನು ಪ್ರತಿಧಾಳಿ ಮಾಡಿದ. ಈ





ಸೆಣಸಾಟದಲ್ಲಿ ಸಾವು ಸಂಭವಿಸದಿದ್ದರೂ ಮಂಗಳ ಪಾಂಡೇ ತೀವ್ರವಾಗಿ ಗಾಯಗೊಳಿಸಲ್ಪಟ್ಟ. ಶೇಖ್ ಪುಲ್ಟು ಎಂಬ ಸೈನಿಕ ಮಂಗಳಪಾಂಡೇಯನ್ನು ಬಲವಾಗಿ ಹಿಡಿದುಕೊಂಡಿದ್ದರಿಂದ ಮಂಗಳ ಪಾಂಡೇ ಗಾಯಗೊಳಿಸಿದ ಇಬ್ಬರು ಬ್ರಿಟಿಶ್ ಅಧಿಕಾರಿಗಳು ಅವನ ಪ್ರಾಣಾಂತಿಕ ಧಾಳಿಯಿಂದ ಪಾರಾಗಿ ತಪ್ಪಿಸಿಕೊಂಡರು. ಇಷ್ಟೆಲ್ಲಾ ಗದ್ದಲ ನಡೆಯುತ್ತಿದ್ದರೂ ಯಾವ ಸಿಪಾಯಿಯೂ ಇಂಗ್ಲಿಷ್ ಅಧಿಕಾರಿಗಳ ಸಹಾಯಕ್ಕಾಗಲೀ ಮಂಗಳ ಪಾಂಡೇಯನ್ನು ಬಂಧಿಸಲಾಗಲೀ ಮುಂದೆ ಬರಲಿಲ್ಲ. ಈ ಸುದ್ದಿಯನ್ನು ತಿಳಿದ ಜನರಲ್ ಹಿಯರ್‌ಸ್ಸೈ ಕುದುರೆಯೇರಿಕೊಂಡು ಸ್ಥಳ ತಲುಪಿದ. ಆಗ ಮಂಗಳ ಪಾಂಡೇ ಇತರ ಸೈನಿಕರಿಗೆ ತಮ್ಮ ಧರ್ಮ ಮತ್ತು ಜಾತಿಯ ಮರ್ಯಾದೆ ಕಾಪಾಡಿಕೊಳ್ಳಲು ಜೀವ ಬಿಡಲು ಮುಂದಾಗಬೇಕೆಂದು ಕರೆಕೊಡುತ್ತಿದ್ದ. ಹಿಯರ್‌ಸ್ಸೈ ಕಾವಲು ಸೈನಿಕರನ್ನು ಒತ್ತಾಯ ಮಾಡಿ ಕರೆದುಕೊಂಡು ಬಂದು ಮಂಗಳ ಪಾಂಡೆಯ ಮೇಲೆ ಧಾಳಿ ಮಾಡಲು ಪ್ರಯತ್ನಿಸಿದ. ಆಗ ಮಂಗಳ ಪಾಂಡೇ ಅವರ ಮೇಲೆ ಗುಂಡು ಹಾರಿಸಿದರೂ ಅದು ಗುರಿ ತಪ್ಪಿತು. ಇನ್ನು ಬ್ರಿಟಿಷ್ ಸಿಪಾಯಿಗಳ ಕೈಗೆ ಸಿಕ್ಕಿ ಸಾಯುವುದಕ್ಕೆ ಬದಲಾಗಿ ತಾನೇ ಆತ್ಮಾಹುತಿ ಮಾಡಿಕೊಳ್ಳುವುದು ಗೌರವಯುತವಾದುದೆಂದು ಭಾವಿಸಿ ತನ್ನ ಮೇಲೆ ತಾನೇ ಗುಂಡು ಹಾರಿಸಿಕೊಂಡ. ಆದರೆ ಅದೂ ಗುರಿ ತಪ್ಪಿ ಆತ್ಮಹತ್ಯೆಯ ಪ್ರಯತ್ನ ವಿಫಲವಾಯಿತು. ಆದರೂ ಈ ಪ್ರಯತ್ನದಿಂದಲೂ ಅವನು ಸಾಕಷ್ಟು ತೀವ್ರವಾಗಿ ಗಾಯಗೊಳ್ಳಲ್ಪಟ್ಟ. ಅವನನ್ನು ಸುತ್ತುವರಿದ ಸೈನಿಕರು ಬಂಧಿಸಿ ಆಸ್ಪತ್ರೆಗೆ ಸಾಗಿಸಿದರು. ನಂತರ ಹಿಯರ್‌ಸ್ಸೈ ಸೈನಿಕರ ಈ ವರ್ತನೆಯ ಬಗ್ಗೆ ಅವರನ್ನು ಪ್ರಶ್ನಿಸಿದಾಗ ಅವರೆಲ್ಲರೂ ಒಕ್ಕೊರಲಿನಿಂದ "ಅವನೊಬ್ಬ ಹುಚ್ಚ. ಅವ ಭಂಗಿ ಕುಡಿದಿದ್ದಾನೆ" ಎಂದು ತಿಳಿಸಿದರು. ಹೀಗೆ ಭಾರತೀಯ ಸೈನಿಕರ ಸ್ವಾಭಿಮಾನ



ಮತ್ತು ಧರ್ಮವನ್ನು ರಕ್ಷಿಸಿಕೊಳ್ಳಲು ಹೋರಾಡಿದ ಮಂಗಳಪಾಂಡೆಗೆ ಅವನ ಸಹೋದ್ಯೋಗಿಗಳು ಹುಚ್ಚನ, ಭಂಗಿಯ ಪಟ್ಟವನ್ನು ಕಟ್ಟಿದರು. ಜನರಲ್ ಆಜ್ಞಾಪಾಲಕರಾಗಿ ಅವರು ತಮ್ಮ ಬ್ಯಾರಕ್‌ಗಳಿಗೆ ಮರಳಿದರು. ಮಂಗಳಪಾಂಡೆಯನ್ನು ಸೈನಿಕ ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿಪಡಿಸಿ ರಾಷ್ಟ್ರದ್ರೋಹಿಯೆಂದು ತೀರ್ಮಾನಿಸಿ ಕೊಲ್ಲಲಾಯಿತು.

34ನೇ ಎನ್.ಐ. ತುಕಡಿಯನ್ನು 9ನೇ ತುಕಡಿಯಂತೆ ವಿಸರ್ಜಿಸಲಾಯಿತು. ಹೀಗೆ ಅವಮಾನಗೊಂಡು ಹೊರಗೆ ತಳ್ಳಲ್ಪಟ್ಟ ಸಿಪಾಯಿಗಳು ದಾಸ್ಯದ ಸಂಕೋಲೆಗಳಿಂದ ಬಿಡುಗಡೆ ಪಡೆದು ಔದ್ ಪ್ರಾಂತ್ಯದ ತಮ್ಮ ದೂರದೂರದ ಊರುಗಳಿಗೆ ತೆರಳಿದರು. ತಮ್ಮ ಹಳ್ಳಿಗಳಿಗೆ ಮರಳಿದ ಸಿಪಾಯಿಗಳು ಹಂದಿ ಮತ್ತು ದನದ ಕೊಬ್ಬಿನಿಂದ ಸವರಿದ ಕಾಡತೂಸುಗಳ ಬಗ್ಗೆ, ತಾವು ಅದರ ವಿರುದ್ಧ ಹೋರಾಡಿದ ಬಗ್ಗೆ ಹೆಮ್ಮೆಯಿಂದ ಪ್ರಚಾರ ಮಾಡಿಕೊಳ್ಳಲಾರಂಭಿಸಿದರು. ಇವರ ಆಕರ್ಷಕ ನಿರೂಪಣೆಗಳನ್ನು ಕೇಳಿದ ಜನತೆ ಈ ಸಿಪಾಯಿಗಳನ್ನು ತಮ್ಮ ಧರ್ಮ ರಕ್ಷಣೆಯ ಹುತಾತ್ಮರೆಂದೇ ಭಾವಿಸಿದರು. ಈ ಸುದ್ದಿ ದೇಶದ ಉದ್ದಗಲಕ್ಕೆಲ್ಲಾ ಹರಡಿ ಬ್ಯಾರಕ್‌ಪುರದ ಘಟನೆಗಳು ಮಾರ್ಚ್ ಕೊನೆಯ ಹೊತ್ತಿಗೆ ಅಂಬಾಲಾದಂತಹ ಮತ್ತೊಂದು ತುದಿಯಲ್ಲೂ ಪ್ರತಿಧ್ವನಿಸಲಾರಂಭಿಸಿದವು. ಇದಾದ ಸ್ವಲ್ಪ ಸಮಯದಲ್ಲೇ ಇದೇ ರೀತಿಯ ಘಟನೆಗಳು ಮೇ ಎರಡರಂದು 7ನೇ ಔದ್ ರೆಜಿಮೆಂಟಿನಲ್ಲಿ ಘಟಿಸಿದವು. ಇಲ್ಲಿಯ ಸಿಪಾಯಿಗಳೂ ಗ್ರೀಸ್ ಮಾಡಲ್ಪಟ್ಟ ಕಾಡತೂಸುಗಳನ್ನು ಕಚ್ಚಿ ಬಳಸಲು ನಿರಾಕರಿಸಿದರೂ. ಮಾರನೇ ದಿನ ಸಿಪಾಯಿಗಳು ಅಧಿಕಾರಿಗಳನ್ನು ಕೊಲ್ಲುವ ಬೆದರಿಕೆ ಹಾಕಿದರು. ಔದ್‌ನ ಪ್ರಧಾನ ಆಯುಕ್ತ ಶೀಘ್ರ ಕಾರ್ಯಾಚರಣೆ ನಡೆಸಿ ಪರಿಸ್ಥಿತಿಯನ್ನು ನಿಯಂತ್ರಣಕ್ಕೆ ತಂದಿದ್ದರಿಂದ ಬಹುಪಾಲು ಬಂಡಾಯಗಾರರು ಪಲಾಯನ ಮಾಡಿದರು. ಉಳಿದವರು ತಮ್ಮ ಶಸ್ತ್ರಾಸ್ತ್ರಗಳನ್ನು ಕೆಳಗಿಳಿಸಿ ಶರಣಾಗತರಾದರು. ನಂತರ ಇಡೀ ತುಕಡಿಯನ್ನು ವಿಸರ್ಜಿಸಲಾಯಿತು. ಇದೇ ಸಮಯದಲ್ಲಿ ಬ್ರಿಟಿಷರು ಗೋದಿ ಹಿಟ್ಟಿನೊಂದಿಗೆ ದನದ ಮೂಳೆಯ ಪುಡಿಯನ್ನು ಬೆರೆಸಿ ಸೈನ್ಯದಲ್ಲಿ ಬಳಸುತ್ತಿದ್ದಾರೆಂಬ ಸುದ್ದಿಯೂ ಹರಡಿ ಮತ್ತಷ್ಟು ಬಿಗುವಿನ ಪರಿಸ್ಥಿತಿಯುಂಟಾಯಿತು.



## ಮೀರತ್ ಬಂಡಾಯ

ಏಪ್ರಿಲ್ 24ರಂದು ದೆಹಲಿಯಿಂದ 40 ಮೈಲಿ ದೂರದಲ್ಲಿದ್ದ ಮೀರತ್‌ಸೈನಿಕ ಕಂಟೋನ್ಮೆಂಟಿನಲ್ಲಿದ್ದ 3ನೇ ಅಶ್ವ ಪಡೆಯ 900 ಸಿಪಾಯಿಗಳ ಪೈಕಿ 85 ಸಿಪಾಯಿಗಳು ಕವಾಯತು ಮೈದಾನದಲ್ಲಿ ಗ್ರೀಸ್ ಮಾಡಲ್ಪಟ್ಟ ಕಾಡತೂಸುಗಳನ್ನು ಬಳಸಲು ನಿರಾಕರಿಸಿದರು. ಅವರನ್ನು ಸೈನಿಕ ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿಪಡಿಸಿ 10 ವರ್ಷಗಳ ಕಠಿಣ ಶಿಕ್ಷೆಗೆ ಗುರಿಪಡಿಸಲಾಯಿತು. ಮೇ 5ರಂದು ಅವರಿಗೆ ಅತ್ಯಂತ ಹೀನಾಯವಾಗಿ ಸಂಕೋಲೆಗಳನ್ನು ತೊಡಿಸಿ ಸರಪಳಿಗಳಿಂದ ಬಿಗಿದು ಮೆರವಣಿಗೆ ಮಾಡಿ ಬಂಧೀಖಾನೆಗೆ ತಳ್ಳಲಾಯಿತು. ಬ್ರಿಟಿಷರಿಗೆ ನಿಷ್ಠೆಯಿಂದ ಸೇವೆ ಸಲ್ಲಿಸುತ್ತಿದ್ದ ತಮ್ಮ ಪ್ರಾಣವನ್ನೇ ಪಣಕ್ಕೊಡ್ಡಿ ಅವರ ಸಾಮ್ರಾಜ್ಯ ವಿಸ್ತರಣೆಗೆ ಸಹಕರಿಸಿ ದೇಶೀಯ ಜನರ ಆಕ್ರೋಶವನ್ನು ಮೈ ಮೇಲೆ ತೆಗೆದುಕೊಂಡು ಮಾನಸಿಕವಾಗಿ ದ್ವಂದ್ವಮಯ ಪರಿಸ್ಥಿತಿಯಲ್ಲಿದ್ದ ಸಹ ಸಿಪಾಯಿಗಳಲ್ಲಿ ಇದು ಸಹಾನುಭೂತಿಯು ಬುಗ್ಗೆಯನ್ನೆಬ್ಬಿಸಿತ್ತು. ತಮ್ಮ ಸಹೋದ್ಯೋಗಿಗಳಿಗೆ ಒದಗಿದ ದುರ್ಗತಿಯ ಬಗ್ಗೆ ಅವರು ಮಮ್ಮಲ ಮರುಗಿ ಆಕ್ರೋಶಗೊಂಡರು. ಇದೇ ಪರಿಸ್ಥಿತಿ ನಮಗೂ ಬರುವ ದಿನ ದೂರವಿಲ್ಲವೆನಿಸಿ ಮೀರತ್‌ನ ಇಡೀ ಸಿಪಾಯಿ ಸಮೂಹ ಕ್ರೋಧದಿಂದ ಕುದಿಯರಾಂಭಿಸಿತು. ತಮ್ಮ ಸ್ನೇಹಿತರಿಗೊದಗಿದ ದುರ್ಗತಿಗೆ ಸೇಡು ತೀರಿಸಿಕೊಳ್ಳಲು ನಿರ್ಧರಿಸಿದರು.

10ನೇ ಮೇ 1857 ಭಾನುವಾರ ಸೂರ್ಯಾಸ್ತದ ಸಮಯ ರೈಫಲ್ ಪಡೆಯ ಬ್ರಿಟಿಷ್ ಸಿಪಾಯಿಗಳು ಚರ್ಚ್‌ನಲ್ಲಿ ಪ್ರಾರ್ಥನೆ ಸಲ್ಲಿಸಲು ಹೋದರು. ಅದೇ ಸಮಯಕ್ಕೆ ಕಾಯುತ್ತಿದ್ದ, 3ನೇ ಅಶ್ವ ಪಡೆಯ ನೂರಾರು ಯೋಧರು ತಮ್ಮ ಮಿತ್ರರನ್ನು ಬಂಧಿಸಿದ್ದ ಜೈಲಿನೆಡೆಗೆ ರಭಸದಿಂದ ಬಿರುಗಾಳಿಯಂತೆ ಮುನ್ನುಗ್ಗಿದ್ದರು. ತಮ್ಮ ಸಂಗಾತಿಗಳನ್ನೇ ಅಲ್ಲದೆ ಎಲ್ಲಾ ಜೈಲಿನ ಖೈದಿಗಳನ್ನು ಮುಕ್ತಗೊಳಿಸಿದರು. ಕರ್ನಲ್ ಫಿನ್ನಿಸ್‌ನ ಮೇಲೆ ಗುಂಡು ಹಾರಿಸಿ ಕೊಲ್ಲಲಾಯಿತು. ಸಿಪಾಯಿಗಳೊಂದಿಗೆ ಸೇರಿಕೊಂಡ ಅಪರಾಧಿಗಳು ಮತ್ತಿತರ ಗುಂಡಾಗಳು ಯುರೋಪಿಯನ್ನರನ್ನು ಕೊಚ್ಚಿ ಕತ್ತರಿಸಲು ಮುಂದಾದರು. ಅವರ ಮನೆಗಳ ಮೇಲೆ ಧಾಳಿ



ಮಾಡಿ, ಲೂಟಿ ಮಾಡಿ ಬೆಂಕಿ ಹಚ್ಚಲಾಯಿತು ಹೆಂಗಸರು ಮಕ್ಕಳೆಂಬುದನ್ನೂ ನೋಡದೆ ನಿರ್ದಯವಾಗಿ ಕೊಲೆಗೈಯ್ಯಲಾರಂಭಿಸಿದರು. ಸುತ್ತಲಿನ ಮನೆಗಳಿಗೆಲ್ಲಾ ಬೆಂಕಿ ಹಚ್ಚಲಾಯಿತು. ಎಲ್ಲಾ ಜನ ಸೇರಿಕೊಂಡು ಬ್ರಿಟಿಷರ ನರಮೇಧ ಮಾಡಿ ಭೂತನರ್ತನ ಮಾಡಿದರು. ಅದೇ ಸಮಯಕ್ಕೆ 11ನೇಯ ವಿಭಾಗದ ಮತ್ತು 20ನೇ ವಿಭಾಗದ ಭಾರತೀಯ ಸೈನಿಕರು ಸೈನ್ಯದ ಬ್ರಿಟಿಷ್ ಅಧಿಕಾರಿಗಳನ್ನು ಗುಂಡಿಟ್ಟುಕೊಂದರು. ಅವರ ವಸತಿ ಸ್ಥಾನಗಳಿಗೆ ಕೊಳ್ಳಿ ಇಟ್ಟರು. ಬ್ರಿಟಿಷ್ ಅಧಿಕಾರಿಗಳು ಈ ಅನಿರೀಕ್ಷಿತ ಆಘಾತದಿಂದ ತತ್ತರಿಸಿ ಹೋದರು. ಅವರಿಗೆ ಕೂಡಲೇ ಏನು ಮಾಡಬೇಕೆಂಬುದೇ ಹೊಳೆಯದಂತಾಯಿತು. ತಮಗೆ ನಿಷ್ಠರಾಗಿದ್ದು, ತಮ್ಮ ಆಜ್ಞಾಪಾಲಕರಾಗಿದ್ದ ಸಿಪಾಯಿಗಳು ಒಮ್ಮಿಂದೊಮ್ಮೆಗೆ ತಮ್ಮ ಮೇಲೆ ಈ ರೀತಿ ಎರಗಿ ಬರಬಹುದೆಂದು ಅವರು ಕನಸುಮನಸಿನಲ್ಲಿಯೂ ಎಣಿಸಿರಲಿಲ್ಲ. ಈ ಅನಿರೀಕ್ಷಿತ ಬೆಳವಣಿಗೆ ಅವರ ಆತ್ಮವಿಶ್ವಾಸಕ್ಕೆ ದೊಡ್ಡ ಪೆಟ್ಟನ್ನು ನೀಡಿತು. ತಮ್ಮ ಶತ್ರುಗಳಾರು ಮಿತ್ರರಾರು ಎಂಬುದೇ ಅವರಿಗೆ ತೋಚದಂತಾಯಿತು. ತಾವು ಶತ್ರು ಪಾಳೆಯದ ಕೇಂದ್ರ ಭಾಗದಲ್ಲಿ ಅತ್ಯಂತ ಭೀತಿಯಿಂದ ಬದುಕಬೇಕಾಗಿದೆ ಎಂದು ಅವರು ಭಾವಿಸುವಂತಾಯಿತು. ಯಾವ ಕ್ಷಣದಲ್ಲಿ ಯಾವ ಕಡೆಯಿಂದ ಯಾರು ಬಂದು ನಮ್ಮ ಮೇಲೆ ಧಾಳಿ ಮಾಡುವರೋ ಎಂಬ ಆತಂಕ ಅವರನ್ನಾವರಿಸಿಕೊಂಡಿತು. ತಮ್ಮ ಹೆಂಡತಿ ಮಕ್ಕಳ ರಕ್ಷಣೆಗೆ ಸುರಕ್ಷಿತ ಸ್ಥಾನಗಳನ್ನು ಹುಡುಕಾಡಬೇಕಾಯಿತು. ತಮ್ಮ ಸಾಮ್ರಾಜ್ಯದ ವಿಸ್ತರಣೆಗೆ ನಿಷ್ಠೆಯಿಂದ ಹೋರಾಡುತ್ತಿದ್ದ ಸಿಪಾಯಿಗಳೇ ಹೀಗೆ ತಮ್ಮ ಸಾರ್ವಭೌಮತ್ವಕ್ಕೆ ಅನಿರೀಕ್ಷಿತವಾಗಿ ಸವಾಲೊಡ್ಡಿದ್ದು ಬ್ರಿಟಿಷ್‌ರನ್ನು ಕಂಗಾಲು ಮಾಡಿತು. ಯಾರ ಬಲದಿಂದ ಅವರು ತಮಗೆ ಬಂದಂತಹ ಸವಾಲುಗಳನ್ನು ಅತ್ಯಂತ ಯಶಸ್ವಿಯಾಗಿ ಎದುರಿಸುತ್ತಿದ್ದರೋ ಅವರೇ ಇಂದು ಅವರ ದೊಡ್ಡ ಶತ್ರುಗಳಾಗಿ ಪರಿವರ್ತನೆಗೊಂಡದ್ದು ಅವರ ಆಡಳಿತಕ್ಕೆ ಅತ್ಯಂತ ದೊಡ್ಡ ಸವಾಲಾಗಿ ಪರಿಣಮಿಸಿತು.

ಬಂಡೆದ್ದ ಸಿಪಾಯಿಗಳಿಗೆ ಇನ್ನು ಮೀರತ್‌ನಲ್ಲಿ ಉಳಿಯುವುದು ಅತ್ಯಂತ ಅಪಾಯಕಾರಿಯಾಗಿ ಕಂಡಿತು. ಗೂಂಡಾಗಳು ನಡೆಸಿದ ಹಿಂಸಾಚಾರದ ತೀವ್ರತೆ ಅವರಿಗೆ ಅರಿವಾಗಿ ಅವರು ಆದಷ್ಟು ಶೀಘ್ರವಾಗಿ ಮೀರತ್‌ನಿಂದ ಸುರಕ್ಷಿತ ಜಾಗಕ್ಕೆ ರವಾನೆ



ಹೊಂದದಿದ್ದರೆ ಅಪಾಯ ಖಂಡಿತ ಎಂದು ಭಾವಿಸಿದರು. ಯಾವ ಗಳಿಗೆಯಲ್ಲಾದರೂ ಬ್ರಿಟಿಷರು ತಮ್ಮ ಸೈನ್ಯ ಬಲದೊಂದಿಗೆ ನಮ್ಮ ಮೇಲೆ ಧಾಳಿ ಮಾಡಿ ಇಡೀ ಬಂಡಾಯವನ್ನು ಹೊಸಕಿ ಹಾಕಬಲ್ಲರೆಂದು ಅವರು ಭಾವಿಸಿದರು. ಕೂಡಲೇ ಕೆಲವು ಪ್ರಮುಖ ಸಿಪಾಯಿಗಳು ಆಲೋಚಿಸಿ ಮೀರತ್ ತೊರೆದು ದೆಹಲಿಯ ಕಡೆ ಪ್ರಯಾಣ ಮಾಡಲು ತೀರ್ಮಾನಿಸಿದರು. ತಕ್ಷಣ ಅವರು ಬ್ರಿಟಿಷರ ಪ್ರತಿಧಾಳಿಯಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಈ ತೀರ್ಮಾನಕ್ಕೆ ಬರಬೇಕಾಯಿತು. ತಾವು ನಡೆಸಿದ ಕಾರ್ಯಾಚರಣೆಗೆ ದೊರೆತ ಅನಿರೀಕ್ಷಿತ ಯಶಸ್ಸಿನಿಂದ ಉತ್ಸಾಹಿತರಾಗಿ ಅವರು ಇಡೀ ರಾತ್ರಿ ಪ್ರಯಾಣ ಮಾಡಿ ಮಾರನೇ ದಿನ ಬೆಳಗಿನ ಹೊತ್ತಿಗೆ ದೆಹಲಿ ತಲುಪಿದರು.



**ದೆಹಲಿಗೆ ಹರಡಿದ ಬಂಡಾಯ**

11.5.1857ರ ಬೆಳಿಗ್ಗೆ ಅವರು ನೇರವಾಗಿ ದೆಹಲಿಯ ಪದಚ್ಯುತ ಸುಲ್ತಾನ ಬಹಾದ್ದೂರ್ ಷಾ ಬಳಿಗೆ ಹೋಗಿ ಅವನನ್ನು ತಮ್ಮ ಮುಖಂಡನಾಗಬೇಕೆಂದು ಕೇಳಿಕೊಂಡರು. ಆಡಳಿತದಲ್ಲಿ ನಿರಾಸಕ್ತನಾಗಿ ಸ್ವಭಾವತಹ ಕವಿಯಾದ 90 ವರ್ಷ ವಯಸ್ಸಿನ ಬಹಾದ್ದೂರ್ ಷಾ ಇಂತಹ ಅನಿರೀಕ್ಷಿತ ಕೋರಿಕೆಯನ್ನು ಒಪ್ಪಿಕೊಳ್ಳಲು ಹಿಂದೆ ಮುಂದೆ ನೋಡಿದ. ವಾರ್ಷಿಕ ಅವನು ಬ್ರಿಟಿಷರಿಂದ 12 ಲಕ್ಷ ರೂ ನಿವೃತ್ತಿ ವೇತನ ಪಡೆಯುತ್ತಿದ್ದ. ಸೈನಿಕ ತರಬೇತಿಯಾಗಲಿ ಯುದ್ಧದ ಅನುಭವವಾಗಲೀ ಇಲ್ಲದ ಬಹಾದ್ದೂರ್ ಷಾ ಸಿಪಾಯಿಗಳ ಮುಖಂಡನಾಗಿ ಬ್ರಿಟಿಷರ ವಿರೋಧಿಯಾಗಲು ಪ್ರಾರಂಭದಲ್ಲಿ ನಿರಾಕರಿಸಿದ. ಕ್ರಮೇಣ ಹೆಚ್ಚು ಹೆಚ್ಚು ಸಿಪಾಂ ಮೀರತ್ ಕಡೆಯಿಂದ ದೆಹಲಿಯಲ್ಲಿ ಜಮಾಯಿಸಲಾರಂಭಿಸಿದರು. ದೆಹಲಿಯ ಕೆಂಪು ಕೋಟೆ ಬಂಡಾಯ ಸೈನಿಕರಿಂದ ತುಂಬಿ ಹೋಯಿತು. ಇಡೀ ದಿನ ದೆಹಲಿಯಲ್ಲಿ ಗೊಂದಲಮಯ ವಾತಾವರಣವಿತ್ತು.ಮೇ 12ರಂದು ಎಲ್ಲಾ ಸಿಪಾಯಿಗಳು ಬಹಾದ್ದೂರ್



ಷಾಗೆ ಗೌರವಪೂರ್ಣವಾಗಿ 'ನಜರ್' ಸಲ್ಲಿಸಿದರು. ತನ್ನ ಉತ್ತರಾಧಿಕಾರಿಯಾಗಿ ಜವಾನ್ ಭಕ್ತನನ್ನು ಬ್ರಿಟಿಷರು ಮಾನ್ಯ ಮಾಡದಿದ್ದ ಅಸಮಾಧಾನದಿಂದಲೂ ಅಪಾರ ಸಂಖ್ಯೆಯ ಸೈನಿಕರು ಒತ್ತಾಯ ಮಾಡಿದ್ದರಿಂದಲೂ ಅಂತಿಮವಾಗಿ ದೆಹಲಿಯ ಪದಚ್ಯುತ ಸುಲ್ತಾನ ಬಹಾದ್ದೂರ್ ಷಾ ಒಲ್ಲದ ಮನಸ್ಸಿನಿಂದಲೇ ಬಂಡಾಯಗಾರರ ನಾಯಕನಾಗಲು ಒಪ್ಪಿಕೊಂಡನು. ನಂತರ ಅವನನ್ನು ಹಿಂದೂಸ್ತಾನದ ಬಾದ್‌ಷಾ ಮತ್ತು ಘಾಜಿಯನ್ನಾಗಿ ಘೋಷಿಸಲಾಯಿತು.

ಸಿಪಾಯಿಗಳ ಒತ್ತಾಯಕ್ಕೆ ಮಣಿದು ಬಂಡಾಯಕ್ಕೆ ನೇತೃತ್ವ ಕೊಡಲು ಒಪ್ಪಿಕೊಂಡರೂ ಅವನಿಗೆ ಅದರ ಯಶಸ್ಸಿನ ಬಗ್ಗೆ ವಿಶ್ವಾಸವಿರಲಿಲ್ಲ. ಅವನಿಗಿದ್ದ ಬ್ರಿಟಿಷ್ ನಿಷ್ಠೆ ಸಂಪೂರ್ಣವಾಗಿ ನಾಶವಾಗಿರಲಿಲ್ಲ. ಧೀರೋದ್ದಾತ ವಿಮೋಚನಾ ಹೋರಾಟಕ್ಕೆ ಸ್ಫೂರ್ತಿದಾಯಕ ನಾಯಕತ್ವ ನೀಡಬಲ್ಲ ಸಾಮರ್ಥ್ಯ ಅವನಲ್ಲಿರಲಿಲ್ಲ. ಆದರೂ ಬಂಡಾಯವೆದ್ದ ಸೈನಿಕರು ಬಹಾದ್ದೂರ್ ಷಾನನ್ನು ಹೆಸರಿಗೆ ಮಾತ್ರ ದೆಹಲಿಯ ಸುಲ್ತಾನನೆಂದು ಕರೆದು ತಮ್ಮ ಹೋರಾಟವನ್ನು ದೆಹಲಿಯ ಕೆಂಪುಕೋಟೆಯಿಂದ ಮುಂದುವರಿಸಲು ಅತ್ಯಗತ್ಯವಾಗಿ ಬೇಕಾಗಿದ್ದ ಸುರಕ್ಷಿತ ಪ್ರತಿಧಾಳಿಯ ತಾಣವನ್ನಾಗಿ ದೆಹಲಿಯ ಕೆಂಪು ಕೋಟೆಯನ್ನು ಪರಿವರ್ತನೆ ಮಾಡಿಕೊಂಡರು. ಅಗಾಧ ಸಂಖ್ಯೆಯಲ್ಲಿ ದೆಹಲಿಯಲ್ಲಿ ಜಮಾಯಿಸಿದ ಬಂಡಾಯಗಾರ ಸಿಪಾಯಿಗಳು ಬ್ರಿಟಿಷ್ ಅಧಿಕಾರಿಗಳಿಗೆ ಮೃತ್ಯು ಸ್ವರೂಪಿಗಳಾಗಿ ಕಂಡರೂ ಮೀರತ್‌ನ ಅತ್ಯಾಚಾರದ ಸುದ್ದಿಗಳಿಂದ ಭೀತಿಗೊಳಗಾದ ಬ್ರಿಟಿಷರು ದೆಹಲಿಯನ್ನು ತ್ಯಜಿಸಿ ಸುರಕ್ಷಿತ ನೆಲೆಗಳಿಗೆ ಪಲಾಯನ ಮಾಡಿದರು. ಸಿಪಾಯಿಗಳು ದೆಹಲಿಯಲ್ಲಿನ ಸೈನಿಕ ನೆಲೆಗಳ ಮೇಲೆ ಧಾಳಿ ಮಾಡಿ ಅವುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಯುರೋಪಿಯನ್ನರನ್ನು ಭಾರತೀಯ ಕ್ರಿಶ್ಚಿಯನ್ನರನ್ನೂ ತಮ್ಮ ಧಾಳಿಯ ನಿಶಾನಿಯನ್ನಾಗಿ ಮಾಡಿಕೊಂಡರು. ಅವರುಗಳನ್ನು ಹುಡುಕಿಹುಡುಕಿ ಕಗ್ಗೊಲೆ ಮಾಡಲಾಯಿತು. ಒಂದು ವಾರದೊಳಗಾಗಿ ಎಲ್ಲಾ ಬ್ರಿಟಿಷರೂ ದೆಹಲಿಯಿಂದ ಪಲಾಯನ ಮಾಡಿದ್ದರು. ದೆಹಲಿಯಲ್ಲೂ ಬಂಡೆದ್ದ ಸಿಪಾಯಿಗಳು ಯಶಸ್ವಿಯಾಗಿದ್ದರು. ಅವರು ದೆಹಲಿಯ ಅಧಿಪತಿಗಳಾದರು. ಬ್ರಿಟಿಷರೇ ತಮ್ಮ ಶಸ್ತ್ರಾಸ್ತ್ರ ಕೋಠಿಗೆ ಬೆಂಕಿ ಹಚ್ಚಿ ಪಲಾಯನ



ಮಾಡಿದರು. ಈ ಯಶಸ್ಸಿನಿಂದ ಉತ್ತೇಜಿತರಾದ ಸೈನಿಕರು ದೆಹಲಿಯಲ್ಲಿ ತಮ್ಮ ಅನಿಯಂತ್ರಿತ ಆಡಳಿತ ನಡೆಸಲಾರಂಭಿಸಿದರು. ಶಿಸ್ತು ವ್ಯವಸ್ಥೆ ಸಂಯಮದ ನೀತಿಗಳನ್ನು ಗಾಳಿಗೆ ತೂರಿ ಸಿಪಾಯಿಗಳು ಅಂಗಡಿ ಮುಂಗಟ್ಟುಗಳನ್ನು ಲೂಟಿ ಮಾಡಿ ಖಾಲಿ ಮಾಡಿದರು. ದೆಹಲಿಯ ವ್ಯಾಪಾರ ಸ್ಥಗಿತಗೊಂಡಿತು. ಬಹಾದ್ದೂರ್ ಷಾನನ್ನು ದೆಹಲಿಯ ಸುಲ್ತಾನನೆಂದು ಘೋಷಿಸಿದರು. ಅವನಿಗೆ ಗೌರವವನ್ನು ನೀಡುತ್ತಿರಲಿಲ್ಲ. ಅವನ ಆದೇಶಗಳನ್ನು ಪಾಲಿಸುತ್ತಿರಲಿಲ್ಲ. ದೆಹಲಿಯ ಸಿಪಾಯಿಗಳಿಗೂ ಹೊರಗಿನಿಂದ ಬಂದ ಸಿಪಾಯಿಗಳಿಗೂ ಹೊಂದಾಣಿಕೆಯಾಗಲಿಲ್ಲ. ಅವರುಗಳಿಗೆ ಪರಸ್ಪರ ವಿಶ್ವಾಸವಿರಲಿಲ್ಲ. ಒಬ್ಬರು ಮತ್ತೊಬ್ಬರನ್ನು ಅನುಮಾನದಿಂದ ನೋಡುತ್ತಿದ್ದರು. ಈ ಎಲ್ಲದರ ನಡುವೆಯೂ ದೆಹಲಿಯ ಪತನ ಮತ್ತು ಬಹಾದ್ದೂರ್ ಷಾನನ್ನು ಹಿಂದೂಸ್ತಾನದ ಸಾಮ್ರಾಟನೆಂದು ಘೋಷಿಸಿದ್ದು, ಬ್ರಿಟಿಶ್ ಸಾರ್ವಭೌಮತ್ವಕ್ಕೆ ಅತ್ಯಂತ ಬಲವಾದ ಪೆಟ್ಟನ್ನು ಕೊಟ್ಟಿತು. ಹಿಂದೂ ಮುಸ್ಲಿಂ ಸಿಪಾಯಿಗಳು ತಾತ್ಕಾಲಿಕವಾಗಿಯಾದರೂ ತಮ್ಮ ದ್ವೇಷವನ್ನು ಮರೆತು ಬ್ರಿಟಿಷರ ವಿರುದ್ಧ ಐಕ್ಯ ಹೋರಾಟ ಮಾಡಿದರು. ಕೆಲವೇ ಮಂದಿ ಸಿಪಾಯಿಗಳು ಸಂಕುಚಿತ ಸ್ವಭಾವದ ಮನೋಭಾವವನ್ನು ತೋರೆದು ಬ್ರಿಟಿಷರ ವಿರುದ್ಧ ಹಿಂದೂ ಮುಸಲ್ಮಾನರ ಐಕ್ಯ ಹೋರಾಟಕ್ಕೆ ಕರೆ ನೀಡಿದರು. ಸಾಮೂಹಿಕವಾಗಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸುವ ಬ್ರಿಟಿಷರ ವಿರುದ್ಧ ಹೋರಾಡಲು ಕರೆ ನೀಡಿದರು. ಈ ಎಲ್ಲಾ ಪ್ರಯತ್ನಗಳ ನಡುವೆಯೂ ವಿವಿಧ ಸ್ಥಳಗಳಿಂದ ಬಂದಿದ್ದ ಸಿಪಾಯಿಗಳು ಒಗ್ಗೂಡಿ ಬ್ರಿಟಿಷರ ವಿರುದ್ಧ ಒಬ್ಬ ಸಮರ್ಥ ನಾಯಕನ ಆಜ್ಞೆಗೆ ಒಳಪಟ್ಟು ಹೋರಾಟವನ್ನು ಮುಂದುವರಿಸಲಿಲ್ಲ. ಆದರೂ ಮೀರತ್ ಮತ್ತು ದೆಹಲಿಯ ಪತನದ ರೋಮಾಂಚನ ದೇಶದ ಬೇರೆ ಬೇರೆ ಭಾಗಗಳಿಗೆ ಶೀಘ್ರವಾಗಿ ಹರಡಿತು.

## ಉತ್ತರ ಭಾರತಕ್ಕೆಲ್ಲಾ ಹರಡಿದ ಕಾಡ್ಗಿಚ್ಚು

ಮೇ 13ರಂದು ಸಿಪಾಯಿಗಳು ಫಿರೋಜ್‌ಪುರದಲ್ಲಿ ದಂಗೆಯೆದ್ದರು. 14ರಂದು ಮುಜಫರ್‌ಪುರದಲ್ಲಿ ದಂಗೆಗಳು ಕಾಣಿಸಿಕೊಂಡವು. ಇಡೀ ಉತ್ತರ ಭಾರತದಲ್ಲಿ ಅಲ್ಲಲ್ಲಿ ಸಿಪಾಯಿ ದಂಗೆಗಳು ಹರಡುತ್ತಾ ಹೋಗಿ ಕ್ರಮೇಣ ನಾಗರೀಕರೂ ಆ ದಂಗೆಗಳಿಗೆ ಬೆಂಬಲ



ನೀಡುತ್ತಾ ಬಂದರು.

ಕಡೆಯ ಪೇಶ್ವಾ ಎರಡನೇ ಬಾಜಿರಾವ್‌ನ ದತ್ತು ಪುತ್ರ ನಾನಾ ಸಾಹೇಬ್ ಬ್ರಿಟಿಷರ ವಿರುದ್ಧ ನಡೆಯುತ್ತಿದ್ದ ಹೋರಾಟಕ್ಕೆ ಸೇರ್ಪಡೆಯಾದ ಕಾನ್‌ಪುರದ ಖಜಾನೆ ಮತ್ತು ಶಸ್ತ್ರಾಸ್ತ್ರ ಕೋಠಿಗಳ ಮೇಲೆಬಂಡೆದ್ದ ಸಿಪಾಯಿಗಳು ಧಾಳಿ ಮಾಡಿದಾಗ ನಾನಾ ಸಾಹೇಬ್ ಮತ್ತು ಅವನ ನಿಷ್ಠಾವಂತ ದಂಡ ನಾಯಕ ತಾಂತ್ಯಾಟೋಪಿ ಬಂಡಾಯಗಾರರ ಜೊತೆ ಸೇರಿಕೊಂಡು ಭಾರತೀಯ ಸೈನಿಕರ ಹೋರಾಟಕ್ಕೆ ಬೆಂಬಲ ಸೂಚಿಸಿ ಅವರ ಮುಖಂಡರಾಗಿ ಕಾನ್‌ಪುರ ಪ್ರದೇಶದಲ್ಲಿ ಹೋರಾಡಿದರು. ಜೂನ್ 6ರಂದು ನಾನಾ ಸಾಹೇಬ್ ಮತ್ತು ತಾಂತ್ಯಾಟೋಪಿ ಕಾನ್ಪುರವನ್ನು ತಮ್ಮ ನೆಲೆಯನ್ನಾಗಿ ಮಾಡಿಕೊಂಡು ಬ್ರಿಟಿಷರ ವಿರುದ್ಧ ಹೋರಾಡಿದರು. ಕಾನ್ಪುರದಲ್ಲಿ ಬ್ರಿಟಿಷರ ಅಪಾರ ಐಶ್ವರ್ಯ ಹಾಗೂ ಮದ್ದು ಗುಂಡುಗಳು ಬಂಡಾಯಗಾರರ ವಶವಾದವು. ಕುನ್ವರ್ ಸಿಂಗ್ ಮತ್ತು ನಾನಾ ಆರ್ಹಾದಲ್ಲಿನ ಬ್ರಿಟಿಷರ ರಕ್ಷಣಾ ನೆಲೆಯ ಮೇಲೆ ಧಾಳಿ ಮಾಡಿದರು. ಅಲ್ಲಿ ಆಶ್ರಯ ಪಡೆದಿದ್ದ ಬ್ರಿಟಿಷರು ಶರಣಾಗತರಾಗಿ ಅವರನ್ನು ಸುರಕ್ಷಿತವಾಗಿ ಅಲಹಾಬಾದ್‌ಗೆ ತಲುಪಲು ಅವಕಾಶ ಮಾಡಿಕೊಡಬೇಕೆಂದು ಒಪ್ಪಂದವಾಯಿತು. ಜೂನ್ 27ರ ಬೆಳಿಗ್ಗೆ 40 ದೋಣಿಗಳಲ್ಲಿ ಸತಿ ಚೌರಾ ಘಾಟ್‌ನಿಂದ ಬ್ರಿಟಿಷರೇ ಅಲಹಾಬಾದ್‌ಗೆ ಪ್ರಯಾಣ ಪ್ರಾರಂಭಿಸಿದಾಗ ಒಪ್ಪಂದ ಮುರಿದು ಎರಡೂ ಕಡೆಯವರೂ ಗುಂಡು ಹಾರಿಸಿಕೊಂಡಾಗ ದೋಣಿಗಳಿಗೆ ಬೆಂಕಿ ತಗುಲಿ ಹಲವಾರು ಜನ ದೋಣಿಗಳಲ್ಲಿ ಸುಟ್ಟು ಹೋದರು. ಮತ್ತೆ ಹಲವಾರು ಹೆಂಗಸರು ಮಕ್ಕಳು ನದಿ ನೀರಿನಲ್ಲಿ ಮುಳುಗಿ ಕೊಚ್ಚಿ ಹೋದರು. ಇದು ಸಿಪಾಯಿಗಳ ಬಂಡಾಯದ ಅತ್ಯಂತ ದೊಡ್ಡ ದುರಂತಗಳಲ್ಲಿ ಒಂದಾಯಿತು. ಸತಿ ಚೌರಾ ಘಾಟ್‌ನ ದುರಂತದ ನಂತರ ನಾನಾ ಸಾಹೇಬ್ ಬಂಡಾಯವೆದ್ದ ಸಿಪಾಯಿಗಳ ದೊಡ್ಡ ನಾಯಕನಾಗಿ ರೂಪಿತನಾದ. ಜೂನ್ 30ರಂದು ಅವನನ್ನು ಅತ್ಯಂತ ಅದ್ದೂರಿಯಿಂದ





ಬಿತೂರ್ ಅರಮನೆಯಲ್ಲಿ ಪೇಶ್ವೆಯಾಗಿ ಪಟ್ಟ ಕಟ್ಟಲಾಯಿತು.

ಸಿಪಾಯಿಗಳ ಬಂಡಾಯ ಶೀಘ್ರವಾಗಿ ಯಮುನಾ ನದಿಯ ದಕ್ಷಿಣಕ್ಕೂ ಹರಡಿತು. ಜೂನ್ 5ರಂದು ಸಿಪಾಯಿಗಳು ಅತ್ಯಂತ ಶಾಂತಿಯುತವಾಗಿ ಒಂದು ನೆಪ ಮಾಡಿಕೊಂಡು ಝಾನ್ಸಿಯಲ್ಲಿನ ಚಿಕ್ಕ ಕೋಟೆಯನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಮಾರನೇ ದಿನ ಮೊದಲೇ ಯೋಜಿಸಿದ್ದಂತೆ ಝಾನ್ಸಿಯಲ್ಲಿನ ಇಡೀ ಸೈನ್ಯ ಬಂಡಾಯವೆದ್ದಿತು. ಕೆಲವು ಅಧಿಕಾರಿಗಳು ಕೊಲ್ಲಲ್ಪಟ್ಟರೆ ಮತ್ತೆ ಕೆಲವರು ಗಾಯಗೊಳಿಸಲ್ಪಟ್ಟರು. ಬ್ರಿಟಿಷರು ಝಾನ್ಸಿಯಲ್ಲಿನ ದೊಡ್ಡ ಕೋಟೆಯಲ್ಲಿ ರಕ್ಷಣೆ ಪಡೆದರು. ಅವರು ನಿರಾಯುಧರಾಗಿ ಬಂದರೆ ಅವರನ್ನು ಸುರಕ್ಷಿತರಾಗಿ ಹೊರಬಿಡಲಾಗುವುದೆಂಬ ಆಶ್ವಾಸನೆಯನ್ನು ನೀಡಲಾಯಿತು. ಜೂನ್ 8ರಂದು ಅವರು ಕೋಟೆಯಿಂದ ಹೊರಬರುತ್ತಿದ್ದಂತೆ ಅವರನ್ನು ತೋಟವೊಂದಕ್ಕೆ ಕರೆದುಕೊಂಡು ಹೋಗಿ ಹೆಂಗಸರು ಮಕ್ಕಳೆನ್ನದೆ ಸುಮಾರು 72 ಜನರನ್ನು ಹಾಡು ಹಗಲಿನಲ್ಲಿಯೇ ಅತ್ಯಂತ ನಿರ್ದಯವಾಗಿ ಕೊಲ್ಲಲಾಯಿತು. ಈ ಹೀನಾಯ ಘಟನೆಯು ನಡೆದ 3 ದಿನಗಳ ನಂತರ ಬಂಡಾಯಗಾರರು ದೆಹಲಿಯ ಕಡೆಗೆ ದಂಡಯಾತ್ರೆ ಮಾಡಿದರು.

ಗಂಗಾಧರ್ ರಾವ್‌ನ ವಿಧವೆ ರಾಣಿ ಲಕ್ಷ್ಮಿಭಾಯಿ ಆರಂಭದಲ್ಲಿ ಸಿಪಾಯಿಗಳ ಬಂಡಾಯದ ಜೊತೆ ಯಾವ ಸಂಬಂಧವನ್ನು ಹೊಂದಿರದಿದ್ದರೂ ನಂತರ ಸಿಪಾಯಿಗಳು ರಾಣಿಯನ್ನು ಬಂಡಾಯಗಾರರ ಜೊತೆ ಸೇರಿಕೊಳ್ಳುವಂತೆ ಒತ್ತಾಯ ತಂದರು. ಡಾಲ್‌ಹೌಸಿಯ ದತ್ತು ಮಕ್ಕಳಿಗೆ ಹಕ್ಕಿಲ್ಲವೆಂಬ ನಿಯಮದಿಂದ ಅನ್ಯಾಯ ಕ್ಕೊಳಗಾಗಿದ್ದ ರಾಣಿ ಬ್ರಿಟಿಷರ


1857-ಭಾರತದ ಪ್ರಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ನೇತೃತ್ವ ವಹಿಸಿದ್ದ ತಾಂತ್ಯಾಟೋಪೆ ಮತ್ತವನ ಸೈನಿಕರು ಝಾನ್ಸಿ ರಾಣಿಯ ಜೊತೆ ಸೇರಿ ಬ್ರಿಟಿಶರ ವಿರುದ್ಧ ಹೋರಾಡಿದರು.

ಅವಿಶ್ವಾಸದ ನಡವಳಿಕೆ ಮತ್ತು ಸಿಪಾಯಿಗಳ ಬೆದರಿಕೆ ಮತ್ತು ಒತ್ತಾಯಗಳಿಗೆ ಮಣಿದು ಬಂಡಾಯಗಾರರ ಜೊತೆ ಸೇರಿಕೊಂಡಳು. ಆದರೂ ರಾಣಿ ಲಕ್ಷ್ಮಿಭಾಯಿ ಈ ಎಲ್ಲದರ ಬಗ್ಗೆ ಬ್ರಿಟಿಷರಿಗೆ ವರದಿ ಸಲ್ಲಿಸಿದಳು. ಬ್ರಿಟಿಷರು ಝಾನ್ಸಿಯ ಆಡಳಿತವನ್ನು ಆಕೆಗೆ ವಹಿಸಿದರೂ ಆಕೆಯ ಮೇಲೆ ನಿಗಾ ಇಡಲಾಯಿತು. ಆಕೆ ಬಂಡಾಯ ಹೂಡಿದ ಸಿಪಾಯಿಗಳ ಜೊತೆ ಷಾಮೀಲಾಗಿರಬಹುದೆಂಬ ಅಪನಂಬಿಕೆಯನ್ನಿಟ್ಟುಕೊಂಡು ಅವಳ ವಿರುದ್ಧ ಎಲ್ಲಾ ಸಾಕ್ಷ್ಯಾಧಾರಗಳನ್ನು ಸಂಗ್ರಹಿಸಲು ತೊಡಗಿದರು. ಅವಳು ಬ್ರಿಟಿಷರಿಗೆ ತನ್ನ ನಿಷ್ಠೆಯನ್ನು ಘೋಷಿಸಿದ್ದರೂ ಬ್ರಿಟಿಷರು ಈ ರೀತಿ ಅವಳ ನಿಷ್ಠೆಯ ಬಗ್ಗೆ ಅಪನಂಬಿಕೆ ವ್ಯಕ್ತಪಡಿಸಿದ್ದು ಅವಳಿಗೆ ಸರಿಬರಲಿಲ್ಲ.



ಸಂದಿಗ್ಧ ಪರಿಸ್ಥಿತಿಗೆ ಸಿಕ್ಕಿಕೊಂಡ ರಾಣಿ ಬ್ರಿಟಿಷರ ನೇಣಿನ ಹಗ್ಗಕ್ಕೆ ಸಿಲುಕಿಕೊಳ್ಳುವುದು ಇಲ್ಲವೇ ಹೋರಾಡಿ ತನ್ನ ಗೌರವವನ್ನು ಕಾಪಾಡಿಕೊಳ್ಳಬೇಕಾದಂತಹ ಅನಿವಾರ್ಯ ಸನ್ನಿವೇಶದಲ್ಲಿ ಅವಳು ಬ್ರಿಟಿಷರ ವಿರುದ್ಧ ಬಂಡೆದ್ದಳು. ರಾಣಿ ಬ್ರಿಟಿಷರ ವಿರುದ್ಧ ಬಂಡೇಳುವುದೆಂದು ತೀರ್ಮಾನಿಸಿದ ತಕ್ಷಣ ಸೈನ್ಯಕ್ಕೆ ಭರ್ತಿ ಮಾಡಿಕೊಳ್ಳಲಾರಂಭಿಸಿದಳು. ಹಾಗೆಯೇ ತಾಂತ್ಯಾ ಟೋಪಿಯ ಸಹಾಯವನ್ನು ಕೋರಿದಳು. ಝಾನ್ಸಿಯಲ್ಲಿ ಬ್ರಿಟಿಷರನ್ನು ಎದುರಿಸಲು ಆಕೆ ಎಲ್ಲಾ ಸಿದ್ಧತೆಯನ್ನು ಮಾಡಿಕೊಂಡಳು.

ಭಾರತದ ಬೇರೆ ಬೇರೆ ಭಾಗಗಳಲ್ಲಿ ಉದ್ಭವವಾಗುತ್ತಿದ್ದ ಬಂಡಾಯಗಳಿಂದ ಗಾಬರಿಗೊಂಡ ಬ್ರಿಟಿಷರು ಅಲ್ಲಲ್ಲಿ ಭಾರತೀಯ ಸಿಪಾಯಿಗಳನ್ನು ನಿಶ್ಯಸ್ತ್ರಗೊಳಿಸಲಾರಂಭಿಸಿದರು. ಲಾಹೋರ್‌ನಲ್ಲಿ 2500 ಸಿಪಾಯಿಗಳು ಶಸ್ತ್ರಾಸ್ತ್ರಗಳನ್ನು ಶಾಂತಿಯುತವಾಗಿ ಬ್ರಿಟಿಷರಿಗೆ ಒಪ್ಪಿಸಿದರು. ಪಂಜಾಬಿನ ಜಲಂದರ್‌ನಲ್ಲಿ ಸಿಪಾಯಿಗಳಿಂದ ಆಯುಧಗಳನ್ನು ಪಡೆಯಲು ಪ್ರಯತ್ನಿಸಿದಾಗ ಅವರು ಆಯುಧಗಳನ್ನು ಒಪ್ಪಿಸಲು ನಿರಾಕರಿಸಿ



ಲೂಧಿಯಾನದ ಮೇಲೆ ಧಾಳಿ ಮಾಡಿದರು. ಅಲ್ಲಿ ಸರಕಾರಿ ಅಧಿಕಾರಿಗಳು ಹಾಗೂ ವ್ಯಾಪಾರಿಗಳ ಮನೆಗಳ ಮೇಲೆ ಧಾಳಿ ಮಾಡಿ ಅಂತಿಮವಾಗಿ ದೆಹಲಿ ತಲುಪಿದರು. ಲೂಧಿಯಾನ ಗ್ರ್ಯಾಂಡ್ ಟ್ರಂಕ್ ರಸ್ತೆ ಅತ್ಯಂತ ಆಯಕಟ್ಟಿನ ಸ್ಥಳವಾಗಿತ್ತು. ಆದರೂ ಅಲ್ಲಿ ಬಂಡಾಯಗಾರರು ಅದರ ಪ್ರಾಮುಖ್ಯತೆಯನ್ನು ಮನಗಾಣದೆ ಅದನ್ನು ತಮ್ಮ ವಶಕ್ಕೆ ತೆಗೆದುಕೊಳ್ಳದೆಹೋದದ್ದು ಯುದ್ಧತಂತ್ರದ ದೃಷ್ಟಿಯಿಂದ ಮುಂದೆ ಅವರನ್ನು ಅತ್ಯಂತ ನಷ್ಟಕ್ಕೀಡು ಮಾಡಿತು. ಮುಲ್ತಾನ್ ಮತ್ತು ಕಾಂಗ್ರಾದಲ್ಲಿನ ಸೈನಿಕರು ಆಯುಧಗಳನ್ನು ಸುಲಭವಾಗಿ ಬ್ರಿಟಿಷ್ ಅಧಿಕಾರಿಗಳಿಗೆ ಒಪ್ಪಿಸಿದರು. ಪೆಶಾವರ್‌ನಲ್ಲಿ ಆಯುಧಗಳ ಸಂಗ್ರಹ ಸುಸೂತ್ರವಾಗಿ ನಡೆಯುತ್ತಿದ್ದಾಗ ರಾತ್ರಿ ವೇಳೆಯಲ್ಲಿ ಒಂದು ಕಂಪೆನಿಯ ಸೈನಿಕರು ಪರಾರಿಯಾದರು. ಅವರನ್ನು ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಿದಾಗ ಸುಮಾರು ನೂರು ಜನ ಸೈನಿಕರು ಕೊಲ್ಲಲ್ಪಟ್ಟರು. 300 ರಿಂದ 400 ಜನ ಗಾಯಗೊಂಡರು. ತಲೆತಪ್ಪಿಸಿಕೊಂಡ ಕೆಲವು ಸೈನಿಕರು 'ಸ್ವಾತ್'ಗೆ ಪ್ರವೇಶಿಸಿ ಅಲ್ಲಿಯ ಆಡಳಿತಗಾರ ಅಖಂಡ್‌ನನ್ನು ತಮ್ಮ ಬಂಡಾಯದ ಜೊತೆ ಸೇರಿಕೊಂಡು ನಾಯಕತ್ವ ನೀಡಬೇಕೆಂದು ಕೇಳಿಕೊಂಡರು. ಅಖಂಡ್ ಈ ಬಂಡಾಯದ ಜೊತೆ ಸೇರಿಕೊಂಡಿದ್ದರೆ ಅದು ಬ್ರಿಟಿಷ್ ಆಡಳಿತಕ್ಕೆ ಬಹಳ ದೊಡ್ಡ ಪೆಟ್ಟನ್ನು ನೀಡುತ್ತಿತ್ತು. ಆದರೆ ಹಾಗಾಗದಿದ್ದರಿಂದ ಪಂಜಾಬ್ ಪ್ರಾಂತ್ಯದಲ್ಲಿ ಬಂಡಾಯ ಗಣನೀಯ ಪ್ರಭಾವವನ್ನುಂಟು ಮಾಡಲಿಲ್ಲ. ಜೂನ್ 14ರಂದು ಔದ್ ಪ್ರಾಂತ್ಯದಿಂದ ಸೈನ್ಯಕ್ಕೆ ಸೇರಿದ ಗ್ವಾಲಿಯರ್‌ನಲ್ಲಿನ ಪಡೆ ಬಂಡೆದ್ದು ಸಾಧ್ಯವಾದಷ್ಟು ಯುರೋಪಿಯನ್ನರನ್ನು ಕೊಂದಿತು. ಆದರೆ ಅವರು ಹೆಂಗಸರು ಮಕ್ಕಳನ್ನು ಕೊಲ್ಲಲಿಲ್ಲ. ಇಂಧೋರ್‌ನಲ್ಲಿ ಹೋಲ್ಕರ್‌ಗೆ ಸೇರಿದ 300 ಬಿಲ್ಲರು ಮತ್ತು 2 ಕಂಪೆನಿ ಅಶ್ವಾರೋಹಿ ಸಿಪಾಯಿಗಳನ್ನು ಬಂಡೆದ್ದ ಸಿಪಾಯಿಗಳನ್ನು ಸದೆಬಡಿಯಲು ಕರೆ ತರಲಾಯಿತು. ಆದರೆ ಅವರು ಬಂಡಾಯಗಾರರ ಜೊತೆ ಸೇರಿಕೊಂಡರು. ಇಲ್ಲಿಯೂ ಯುರೋಪಿಯನ್ನರನ್ನು ಕೊಂದು, ಖಜಾನೆಯನ್ನು ಲೂಟಿ ಮಾಡಿ, ಸಾರ್ವಜನಿಕ ಆಸ್ತಿಪಾಸ್ತಿಯನ್ನು ಹಾಳು ಮಾಡಲಾಯಿತು. ರಾಜಾಸ್ತಾನ್, ಬೆಂಗಾಲ್ ಮತ್ತು ಬಿಹಾರ್‌ಗಳು ಅಷ್ಟಾಗಿ ಸಿಪಾಯಿ ದಂಗೆಯಲ್ಲಿ ಸಕ್ರಿಯವಾಗಿ

ಭಾಗವಹಿಸಲಿಲ್ಲ. ಅಲ್ಲಲ್ಲಿ ಸಣ್ಣ ಪುಟ್ಟ ಗಲಭೆಗಳುಂಟಾದರೂ ಅವು ಅಷ್ಟೊಂದು ತೀವ್ರ ಸ್ವರೂಪದವುಗಳಾಗಿರಲಿಲ್ಲ.

ಅನೇಕ ಸ್ಥಳಗಳಲ್ಲಿ ಬಂಡಾಯಗಾರರ ಯಶಸ್ಸು ಬ್ರಿಟಿಷರ ನರಮೇಧ ಮತ್ತು ಅವರ ಪಲಾಯನ, ಅದರಲ್ಲೂ ವಿಶೇಷವಾಗಿ ದೆಹಲಿಯನ್ನು ಬ್ರಿಟಿಷರು ಖಾಲಿಮಾಡಿದ್ದು ರೋಹಿಲ್ ಖಂಡ್ ಮತ್ತು ಔದ್ ಪ್ರಾಂತ್ಯದ ಜನ ಬ್ರಿಟಿಷ್ ರಾಜ್ಯ ಅಂತ್ಯವಾಯಿತೆಂದು ಭಾವಿಸುವಂತೆ ಮಾಡಿತು. ಹಲವಾರು ಸ್ಥಳಗಳಲ್ಲಿ ಬ್ರಿಟಿಷ್ ಅಧಿಕಾರದ ನಿಶಾನೆ ಕೂಡ ಉಳಿಯಲಿಲ್ಲ. ಹಾಗಾಗಿ ಕೆಲವು ಪ್ರದೇಶಗಳಲ್ಲಿ ಒಂದು ರೀತಿಯ ರಾಜಕೀಯ ಶೂನ್ಯವುಂಟಾಯಿತು. ಇದೇ ಸಂದರ್ಭದಲ್ಲಿ ಎಲ್ಲಾ ವರ್ಗದ ಜನ ಬ್ರಿಟಿಷರ ಬಗ್ಗೆ ವಿವಿಧ ರೀತಿಯ ಅಸಮಾಧಾನ ಹಾಗೂ ಅತೃಪ್ತಿಯನ್ನು ಹೊಂದಿದ್ದರು. ಎಲ್ಲೆಲ್ಲಿ ಬ್ರಿಟಿಷರ ಅಧಿಕಾರ ಬಂಡಾಯದಿಂದ ಧೂಳಿಪಟವಾಗಿತ್ತೋ ಅಲ್ಲೆಲ್ಲಾ ಜನ ತಮ್ಮ ಸ್ವಲಾಭಕ್ಕಾಗಿ ತಮಗೆ ಸಿಕ್ಕಿದ್ದನ್ನು ನಿರ್ಭಯವಾಗಿ ದೋಚಲಾರಂಭಿಸಿದರು. ಗುಜ್ಜಾರ್‌ಗಳು, ರಂಗ್ಡಾರ್‌ಗಳು, ಜಾಟ್‌ಗಳು, ಗೂಂಡಾಗಳು ಸರಕಾರದ ಭಯವಿಲ್ಲದೆ ಸಾಮೂಹಿಕ ಲೂಟಿಗಳಲ್ಲಿ ತೊಡಗಿದರು. ಬ್ರಿಟಿಷರ ಆಳ್ವಿಕೆಯಿಂದ ಜಮೀನು ಕಳೆದುಕೊಂಡವರು, ಸವಲತ್ತುಗಳನ್ನು ಕಳೆದುಕೊಂಡವರು, ಇನಾಮುಗಳನ್ನು ಕಳೆದುಕೊಂಡವರು ಬ್ರಿಟಿಷರ ಈ ಸೋಲಿನಿಂದ ತುಂಬಾ ಖುಷಿಪಟ್ಟರು. ಜನರ ಮೇಲೆ ಸರಕಾರದ ನಿಯಂತ್ರಣ ತಪ್ಪಿದ್ದರಿಂದ ಅನೇಕ ಸಾಲಗಾರರು ತಮ್ಮ ಸಾಲಪತ್ರಗಳು ಹಾಗೂ ಇತರ ಕಾಗದ ಪತ್ರಗಳನ್ನು ಲೂಟಿ ಮಾಡಿ ಧ್ವಂಸ ಮಾಡಿದರು. ಮತ್ತೆ ಕೆಲವು ರೈತರು ಸರಕಾರಕ್ಕೆ, ಜಮೀನ್ದಾರರಿಗೆ ಬಾಕಿ ನೀಡಬೇಕಾಗುತ್ತದೆಂದು ಬಂಡಾಯಗಾರರಿಗೆ ಬೆಂಬಲ ನೀಡಿದರು. ಕೆಲವು ಮುಸ್ಲಿಂ ಮೌಲ್ವಿಗಳು ಧರ್ಮ ವಿರೋಧಿಗಳಾದ ಬ್ರಿಟಿಷರು ತಮ್ಮೆಲ್ಲಾ ಆಸ್ತಿಪಾಸ್ತಿಗಳನ್ನು ನುಂಗಿ ಹಾಕುತ್ತಿರುವುದರಿಂದ, ನಮ್ಮಿಂದ ರಾಜ್ಯವನ್ನು ಕಸಿದುಕೊಂಡು ಮತಾಂತರ ಮಾಡುವ ಮೂಲಕ ಇಸ್ಲಾಂ ಧರ್ಮಕ್ಕೆ ಅಪಾಯವೊಡ್ಡುತ್ತಿರುವುದರಿಂದ ಅವರ ವಿರುದ್ಧ 'ಜಿಹಾದ್'ಗೆ(ಧರ್ಮ ಯುದ್ಧ) ಕರೆ ನೀಡಿದರು.

ಮೀರತ್ ದಂಗೆಯ ಸುದ್ದಿ ಹರಡಿದ ನಂತರ ಮುಜಫರ್‌ಪುರದ ದಂಡಾಧಿಕಾರಿ

ಬರ್‌ಫೋರ್ಡ್ ಭೀತಿಗೊಂಡು ಸರಕಾರಿ ಕಚೇರಿಗಳನ್ನೆಲ್ಲಾ 3 ದಿನಗಳ ಕಾಲ ಮುಚ್ಚಲು ಆಜ್ಞಾಪಿಸಿದ. ಇಲ್ಲಿ ಯಾವುದೇ ಸೈನಿಕ ಬಂಡಾಯ ನಡೆಯಲಿಲ್ಲ. ಮೇ 12ರಂದು ಜೈಲಿನಲ್ಲಿನ ಖೈದಿಗಳು ಬಂಡಾಯವೇಳಲಿದ್ದಾರೆಂಬ ಸುದ್ದಿಯಿಂದ ಭೀತಿಗೊಂಡು ರಾತ್ರೋರಾತ್ರಿ ಕಾಡಿನ ಮೂಲಕ ಪಕ್ಕದಲ್ಲಿದ್ದ ಹಳ್ಳಿಗೆ ಪಲಾಯನ ಮಾಡಿದ. ಆದರೂ ಆ ರಾತ್ರಿ ಮುಜಫರ್‌ಪುರದಲ್ಲಿ ಯಾವ ಘಟನೆಯೂ ನಡೆಯಲಿಲ್ಲ. ಮೇ 13ರಂದು ಸ್ಥಳೀಯ ಜಮೀನ್ದಾರರ ಚಿತಾವಣೆಯಿಂದ ಕೆಲವು ಕಿಡಿಗೇಡಿಗಳು ಅಧಿಕಾರಿಗಳ ಬಂಗಲೆಗಳಿಗೆ ಬೆಂಕಿ ಹಚ್ಚಿದರು. ಇದರಿಂದ ಮತ್ತೂ ಭೀತಿಗೊಂಡ ಬರ್‌ಫೋರ್ಡ್ ಖಜಾನೆಯನ್ನು ತೆಹಸೀಲ್‌ಗೆ ವರ್ಗಾಯಿಸಲು ನಿರ್ಧರಿಸಿದ. ಖಜಾನೆಯ ಕಾವಲುಗಾರ ಈ ರೀತಿ ವರ್ಗಾಯಿಸಲು ನಿರಾಕರಿಸಿದ ಮತ್ತು ಖಜಾನೆಗಳಲ್ಲಿದ್ದ ಪೆಟ್ಟಿಗೆಗಳನ್ನು ಹೊಡೆದು ದೋಚಲು ಮುಂದಾದ. ಸುತ್ತಮುತ್ತಲಿನ ಜನ ಈ ಸುಸಂದರ್ಭವನ್ನು ಉಪಯೋಗಿಸಿಕೊಂಡು ತಮಗೆ ಸಿಕ್ಕಷ್ಟನ್ನು ದೋಚಿದರು. ಅಲ್ಲಿ ಸಿಪಾಯಿಗಳಿಲ್ಲದ್ದರಿಂದ ಬರ್‌ಫೋರ್ಡ್ ತನ್ನ ರಕ್ಷಣೆಗೆ ಜೈಲು ಕಾವಲುಗಾರರನ್ನು ತೆಗೆದುಕೊಳ್ಳಬೇಕಾಗಿ ಬಂದದ್ದರಿಂದ ಖೈದಿಗಳನ್ನೆಲ್ಲಾ ಬಿಡುಗಡೆ ಮಾಡಿದ. ಈ ಎಲ್ಲಾ ಗೊಂದಲಗಳಿಂದ ಸರಕಾರ ಪತನ ಹೊಂದಿದೆ ಎಂದು ಭಾವಿಸಿದ ಜನ ಸರಕಾರಿ ದಫ್ತರ್‌ಗಳಿಗೆ ಬೆಂಕಿ ಹಚ್ಚಿದರು. ಕಛೇರಿಗಳಲ್ಲಿದ್ದ ಜನರಿಗೆ ಬಂಡೆದ್ದ ಸಿಪಾಯಿಗಳು ಬರುತ್ತಿದ್ದಾರೆಂದು ಹೆದರಿಸಿ ಅವರನ್ನು ಅಲ್ಲಿಂದ ಓಡುವಂತೆ ಮಾಡಿ ಆಡಳಿತದ ಎಲ್ಲಾ ಕಚೇರಿಗಳನ್ನೂ ಸುಟ್ಟು ಭಸ್ಮಮಾಡಿದರು. ಕ್ರೂರಿಗಳು ನಿರ್ದಯಿಗಳೂ ಆಗಿದ್ದ ಬನಿಯಾಗಳು ಹಾಗೂ ಮಹಾಜನ್‌ರ ಮೇಲೆ ಜನ ಈ ಅರಾಜಕ ಪರಿಸ್ಥಿತಿಯಲ್ಲಿ ಸೇಡು ತೀರಿಸಿಕೊಳ್ಳಲಾರಂಭಿಸಿದರು. ಸಹರಾನ್‌ಪುರದಲ್ಲೂ ಇದೇ ರೀತಿಯ ಘಟನೆಗಳು ನಡೆದವು. ಹೀಗೆ ರೋಹಿಲ್ ಖಂಡ್ ಮತ್ತು ಔದ್ ಪ್ರಾಂತ್ಯಗಳಲ್ಲಿ ಬಂಡಾಯ ವ್ಯಾಪಕವಾಗಿ ಹರಡಿತು. ಸ್ಥಳೀಯ ಸಣ್ಣ ಪುಟ್ಟನಾಯಕರು ತಮ್ಮದೇ ದರ್ಬಾರು ನಡೆಸಲಾರಂಭಿಸಿದರು. ಹಲವು ಜನ ಬರಹಗಾರರು ಇದನ್ನು ಜನತೆಯ ಉತ್ಕರ್ಷ ಎಂದು ಕರೆದಿದ್ದಾರೆ. ಬಂಡಾಯದ ಬಹುಪಾಲು ಕಡೆಗಳಲ್ಲಿ ಸಿಪಾಯಿಗಳು ಜೈಲಿನ ಖೈದಿಗಳನ್ನು ಬಿಡುಗಡೆ



ಮಾಡುತ್ತಿದ್ದರು. ಅವರು ಗೂಂಡಾಗಳು ಹಾಗೂ ಅತಿಯಾಸೆಯ ಜನ ಆಡಳಿತದ ಭಯವೇ ಇಲ್ಲದೆ ಸಿಕ್ಕಿ ಸಿಕ್ಕಿದ್ದನ್ನು ಮನಬಂದಂತೆ ಲೂಟಿ ಮಾಡಿದರು. ಸಿಪಾಯಿ ದಂಗೆಯ ಬಹುಪಾಲು ಲೂಟಿಗಳು ಹೀಗೆಯೇ ನಡೆದವೆಂಬುದಕ್ಕೆ ವಿಪುಲವಾದ ಸಾಕ್ಷ್ಯಾಧಾರಗಳು ಲಭ್ಯವಿವೆ.

1857ರ ಬಂಡಾಯ ಸಿಪಾಯಿಗಳಿಂದಲೇ ಆರಂಭಗೊಂಡರೂ ಅದೂ ಕೇವಲ ಸಿಪಾಯಿಗಳ ಬಂಡಾಯವಾಗಿ ಉಳಿಯಲಿಲ್ಲ. ಸಿಪಾಯಿಗಳು ತಮ್ಮ ಬೆಂಬಲಕ್ಕೆ ಮಾಜಿ ರಾಜರುಗಳನ್ನು ಬ್ರಿಟಿಷರಿಂದ ಅವಮಾನಕ್ಕೆ ತೊಂದರೆಗೆ ಒಳಗಾದ ಜನರನ್ನು ಅವರು ತಮ್ಮ ತೆಕ್ಕೆಗೆ ತೆಗೆದುಕೊಂಡರು. ಇದಲ್ಲದೆ ಇಡೀ ಆಡಳಿತ ವ್ಯವಸ್ಥೆಯು ಕುಸಿದಾಗ ಅದರ ಲಾಭವನ್ನು ಅನೇಕ ಜನ ವಿಭಾಗಗಳು ಪಡೆದುಕೊಳ್ಳುವ ಪ್ರಯತ್ನವನ್ನು ಮಾಡಿದವು. ಬ್ರಿಟಿಷರು ಭಯಭೀತರಾಗಿ ತೆಗೆದುಕೊಂಡ ಹಲವಾರು ಕ್ರಮಗಳು ಅವರ ಆಡಳಿತದ ದೌರ್ಬಲ್ಯಗಳನ್ನು ಜನಸಾಮಾನ್ಯರಿಗೂ ಪರಿಚಯಿಸಿದವು.

ಬರೈಲಿಯು ರೋಹಿಲರ ಬಂಡಾಯದ ಮುಖ್ಯ ಕೇಂದ್ರವಾಗಿತ್ತು. ಸೈನಿಕರು ಇಲ್ಲಿ ಆರಂಭದಲ್ಲಿ ಬಂಡಾಯ ಹೂಡುವ ಮನೋಸ್ಥಿತಿಯಲ್ಲಿರಲಿಲ್ಲ. ಅವರ ಅಶ್ವದಳ ಬ್ರಿಟಿಷರಿಗೆ ನೆರವು ನೀಡಲು ವೇಗವಾಗಿ ಧಾವಿಸಿ ಬಂದರೂ ದೂರದಿಂದಲೇ ಅವರ ಬರುವಿಕೆಯನ್ನು ವೀಕ್ಷಿಸಿದ ಬ್ರಿಟಿಷರು ಅಶ್ವಪಡೆ ತಮ್ಮ ಮೇಲೆ ಧಾಳಿ ಮಾಡಲು ಬರುತ್ತಿವೆಯೆಂದು ಭಾವಿಸಿ ಪಲಾಯನ ಮಾಡಿದರು. ಅಶ್ವಪಡೆಯವರು ತೋರಿಸುತ್ತಿದ್ದ ಮಿತ್ರತ್ವದ ಸಂಜ್ಞೆಗಳನ್ನು ಗಮನಿಸದೆ ಪಲಾಯ ಮಾಡಿದ್ದರಿಂದ ಅವರು ಅನಿವಾರ್ಯವಾಗಿ ದಂಗೆಯೆದ್ದ ಸಿಪಾಯಿಗಳ ಕಡೆ ಸೇರಿಕೊಂಡರು. ಖಾನ್ ಬಹದ್ದೂರ್ ಖಾನ್ ರೋಹಿಲರ ನಾಯಕನಾದನು. ಅವರ ತಾತ ಹಾಫೀಜ್ ರಹಮತ್ ಖಾನ್‌ನನ್ನು ಬ್ರಿಟಿಷರು ಔದ್ ನವಾಬನ ಬೆಂಬಲದಿಂದ ಸೋಲಿಸಿ ಕೊಂದಿದ್ದರು. ಅದರ ಸೇಡನ್ನು ತೀರಿಸಿಕೊಳ್ಳಲು ಖಾನ್ ಬಹದ್ದೂರ್ ಖಾನ್‌ಗೆ ಒಳ್ಳೆಯ ಅವಕಾಶ ದೊರೆಯಿತು. ದೆಹಲಿಯ ಸುಲ್ತಾನನ ಪ್ರತಿನಿಧಿಯಾಗಿ ಅವನು ಆಡಳಿತವನ್ನು ಕೈಗೆತ್ತಿಕೊಂಡ. ಬ್ರಿಟಿಷ್ ಸಾಮ್ರಾಜ್ಯ ಪತನವಾಗಿದೆಯೆಂದು ಭ್ರಮಿಸಿ ಇಂಗ್ಲೀಷರ ಕಗ್ಗೊಲೆಗೆ ಆಜ್ಞೆ ಮಾಡುವ ಮೂಲಕ ತನ್ನ ಆಡಳಿತವನ್ನಾರಂಭಿಸಿದ. ಆಡಳಿತಕ್ಕೆ ವಿವಿಧ ಹಂತಗಳಲ್ಲಿ ಅಧಿಕಾರಿಗಳನ್ನು ನೇಮಕ ಮಾಡಿದ. ಅನೇಕ ಹಿಂದೂಮತ್ತು ಮುಸ್ಲಿಂ



ಅಧಿಕಾರಿಗಳನ್ನು ನೇಮಕ ಮಾಡಿ ದೆಹಲಿ ಬಾದ್‌ಷಾನಿಗೆ ಉಡುಗೊರೆಗಳ ಸಮೇತ ನಜರ್ ಸಲ್ಲಿಸಿದ.

ಸೈನಿಕ ಬಂಡಾಯದ ಮತ್ತೊಂದು ಪ್ರಮುಖ ಕೇಂದ್ರ ಫರೂಖಾಬಾದ್. 10ನೇ ಎನ್.ಐ. ತುಕಡಿಯ ಸೈನಿಕರು ಜೂನ್ 18ರಂದು ಬಂಡಾಯವೆದ್ದರು. ಅವರು ಪದಚ್ಯುತಿ ಹೊಂದಿದ್ದ ಫರೂಖ್ ಖಾನ್ ನವಾಬನನ್ನು ಗಾದಿಯ ಮೇಲೆ ಕೂರಿಸಿದರು. ಇಡೀ ಖಜಾನೆಯನ್ನು ದೋಚಿದರು.

ಹಲವಾರು ಪ್ರದೇಶಗಳಲ್ಲಿ ಪದಚ್ಯುತಗೊಂಡ ರಾಜರು, ನವಾಬರು, ಜಮೀನ್ದಾರರು, ಬಂಡಾಯಗಾರರ ಮುಖಂಡರಾದರೂ ಕೆಲವು ಪ್ರದೇಶಗಳಲ್ಲಿ ಅಧಿಕಾರಿಗಳೇ ಸ್ಥಳೀಯ ಬಂಡಾಯಕ್ಕೆ ನಾಯಕತ್ವ ಕೊಡಲು ಮುಂದಾದರು. ಇದಕ್ಕೆ ಫತೇಪುರ ಉತ್ತಮ ಉದಾಹರಣೆ. ಫತೇಪುರ ಮಿಲಿಟರಿ ನೆಲೆಯಾಗಿರಲಿಲ್ಲ. ಅಲ್ಲಿ ಸ್ಥಳೀಯ ಜನ ಜೈಲಿನಿಂದ ಬಿಡುಗಡೆ ಹೊಂದಿದ ಖೈದಿಗಳೊಂದಿಗೆ ಸೇರಿ ಬಂಡಾಯ ಹೂಡಿದರು. ಖಜಾನೆಯನ್ನು ಲೂಟಿ ಮಾಡಿ ಕಚೇರಿಗಳಿಗೆ ಬೆಂಕಿಯಿಟ್ಟರು. ಹೆದರಿದ ಬ್ರಿಟಿಷ್ ಅಧಿಕಾರಿಗಳು ಕಾಲಿಗೆ ಬುದ್ದಿ ಹೇಳಿದರು. ಅಲ್ಲಿ ಉಪ ದಂಡಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಹಿಜತುಲ್ಲಾ "ನಾನಾ ಸಾಹೇಬನ" ಹೆಸರಿನಲ್ಲಿ ಆಡಳಿತ ನಡೆಸಲಾರಂಭಿಸಿದ.

ಹೀಗೆ ಸೈನಿಕ ಬಂಡಾಯ ಭಾರತದ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಸ್ವರೂಪಗಳಲ್ಲಿ ವ್ಯಾಪಕವಾಗಿ ಹರಡಿತು. ರೋಹಿಲ್‌ಖಂಡ್ ಪ್ರಾಂತ್ಯದಲ್ಲಿ ಬರೈಲಿ, ಫರೂಕಾಬಾದ್ ಮತ್ತು ಬಿಜನೂರ್ ಬಂಡಾಯದ ನೆಲೆಗಳಾಗಿದ್ದವು. ಇದು ನಂತರ ಬದೌನ್, ಅಲಿಘರ್, ಮಥುರಾ, ಆಗ್ರಾ, ಬಾಂಡಾ, ಹಮೀರ್ ಪುರ್‌ಗಳಲ್ಲೂ ಬಂಡಾಯದ ಘಟನೆಗಳು ಜರುಗಿದವು. ಔದ್‌ನಲ್ಲಿ ಪ್ರಾರಂಭದಲ್ಲಿ ಬಂಡಾಯವನ್ನು ಹತ್ತಿಕ್ಕಲಾದರೂ ಅದು ನಂತರದ ದಿನಗಳಲ್ಲಿ ವ್ಯಾಪಕವಾಗಿ ಹರಡಿತು. ಒಂದು ವಾರದಲ್ಲಿ ಬ್ರಿಟಿಷ್ ಆಡಳಿತ ಔದ್‌ನಲ್ಲಿ ಸಂಪೂರ್ಣವಾಗಿ ಕುಸಿದು ಬಿತ್ತು. ಬ್ರಿಟಿಷ್ ಸರಕಾರದ ಒಬ್ಬ ಅಧಿಕಾರಿಯೂ ಆ ಪ್ರಾಂತ್ಯದಲ್ಲಿ ಉಳಿದಿರಲಿಲ್ಲವೆಂಬುದರಿಂದಲೇ ಅದರ ತೀವ್ರತೆಯನ್ನು ಅರ್ಥ ಮಾಡಿಕೊಳ್ಳಬಹುದು.



ಹೊಸ ಜಮೀನ್ದಾರಿ ಪದ್ಧತಿಯಿಂದ ಜಮೀನು ಕಳೆದುಕೊಂಡಿದ್ದ ತಾಲ್ಲೋಕ್‌ದಾರರು ಬಂಡಾಯವೆದ್ದು ಹರಾಜಿನಲ್ಲಿ ತಮ್ಮ ಜಮೀನುಗಳನ್ನು ಕೊಂಡಿದ್ದ ಮಾಲೀಕರನ್ನು ವಕ್ಕಲೆಬ್ಬಿಸಿ ಅವರಿಂದ ತಾವು ಕಳೆದುಕೊಂಡಿದ್ದ ಜಮೀನನ್ನು ವಶಪಡಿಸಿಕೊಂಡರು. ಜುಲೈ 7ರಂದು ಬೇಗಂ ಹಜರತ್ ಮಹಲ್‌ಳ ಮಗ ಬಿರಜಿಸ್ ಖಾದಿರ್‌ನನ್ನು ಸುಲ್ತಾನನನ್ನಾಗಿ ಮಾಡಲಾಯಿತು. ಶರಾಫ್ ಉದ್ದೌಲನ ಪ್ರಧಾನ ಮಂತ್ರಿತ್ವದಲ್ಲಿ ಆಡಳಿತವನ್ನು ಲಖನೌದಲ್ಲಿ ಆರಂಭ ಮಾಡಲಾಯಿತು. ಬ್ರಿಟಿಷರು ಈ ದಂಗೆಯನ್ನು ತಮ್ಮೆಲ್ಲಾ ಮಿಲಿಟರಿ ಶಕ್ತಿಯಿಂದ ಸದೆಬಡಿಯುವವರೆಗೆ ಸುಮಾರು 8 ತಿಂಗಳ ಕಾಲ ಈ ಪರ್ಯಾಯ ಆಡಳಿತ ವ್ಯವಸ್ಥೆ ಮುಂದುವರೆಯಿತು. ಬೇಗಂ ಹಜರತ್ ಮಹಲ್‌ಳ ಸ್ವಾತಂತ್ರ್ಯ ಹೋರಾಟಕ್ಕೆ ಲಖನೌ ಕೇಂದ್ರವಾಗಿ ಅಪಾರ ಜನ ಬೆಂಬಲವಿದ್ದುದರಿಂದ ಇದು ಸಾಧ್ಯವಾಯಿತು. ಔದ್ ಮತ್ತು ರೋಹಿಲ್‌ಖಂಡ್ ಪ್ರದೇಶಗಳ ಬಂಡಾಯಗಾರರು ಸಾಧಿಸಿದ ಯಶಸ್ಸು ಇಡೀ ಬಂಡಾಯದ ಉನ್ನತ ಹಂತವಾಗಿತ್ತು. ಆರಂಭದಲ್ಲಿ ಅನಿರೀಕ್ಷಿತ ಬೆಳವಣಿಗೆಯಿಂದ ಆಘಾತಗೊಂಡ ಬ್ರಿಟಿಷರು ಕ್ರಮೇಣ ಪರಿಸ್ಥಿತಿಯ ಮೇಲೆ ತಮ್ಮ ನಿಯಂತ್ರಣವನ್ನು ಸಾಧಿಸಲು ಎಲ್ಲಾ ಪ್ರಯತ್ನ ಮಾಡಿದರು.

ಬ್ರಿಟಿಷರು ಕಲ್ಕತ್ತಾದಲ್ಲಿದ್ದ ತಮ್ಮ ಧಾಳಿ ಪಡೆಗಳನ್ನು ಪಶ್ಚಿಮಕ್ಕೆ ಕಳುಹಿಸಿಅಲ್ಲಿದ್ದ ಪಡೆಗಳಿಂದ ದೆಹಲಿಯನ್ನು ವಶಪಡಿಸಿಕೊಳ್ಳುವ ಯೋಜನೆ ಸಿದ್ಧಪಡಿಸಿದರು. ಬಂಡಾಯದ ಸುದ್ದಿ ತಿಳಿದ ತಕ್ಷಣ ಗವರ್ನರ್ ಜನರಲ್ ಆದ ಲಾರ್ಡ್ ಕ್ಯಾನಿಂಗ್ ಬಾಂಬೆ, ಮದ್ರಾಸ್, ಕಲ್ಕತ್ತಾದಲ್ಲಿ ಸಾಧ್ಯವಿದ್ದ ಎಲ್ಲಾ ಪಡೆಗಳನ್ನು ಒಗ್ಗೂಡಿಸಿಕೊಂಡು ಸಿಲೋನ್‌ನಿಂದಲೂ ಸೈನ್ಯದ ನೆರವನ್ನೂ ಕೋರಿದ ಪಂಜಾಬ್‌ನಲ್ಲಿನ ಎಲ್ಲಾ ಸಿಕ್ ಮತ್ತು ಯುರೋಪಿಯನ್ ಸೈನಿಕ ಪಡೆಗಳನ್ನು ದೆಹಲಿಯ ಕಡೆಗೆ ರವಾನಿಸಿದ. ಜನರಲ್ ಸರ್ ಹೆನ್ರಿ ಬರ್ನಾಡ್ ನೇತೃತ್ವದಲ್ಲಿ ಮೀರತ್ ಕಡೆಯಿಂದ ಸೈನ್ಯ ದೆಹಲಿಯ ಕಡೆಗೆ ರವಾನಿಸಲ್ಪಟ್ಟಿತು. ಬ್ರಿಟಿಷರಿಗೆ ದೆಹಲಿಯನ್ನು ವಶಪಡಿಸಿಕೊಳ್ಳುವುದು ಪ್ರತಿಷ್ಠೆಯ ಪ್ರಶ್ನೆಯಾಗಿತ್ತು. ಬಂಡೆದ್ದ ಸಿಪಾಯಿಗಳು ಅಷ್ಟೇ ದೃಢವಾಗಿ ದೆಹಲಿಯ ಕೋಟೆಯನ್ನು ರಕ್ಷಿಸಿಕೊಳ್ಳಲು ಹೋರಾಡಿದರು. ಎರಡೂ ಕಡೆಯವರಿಗೆ ಇದು ಜೀವನ್ಮರಣದ ಪ್ರಶ್ನೆಯಾಗಿತ್ತು. ಬ್ರಿಟಿಷರು ಪಂಜಾಬ್ ಕಡೆಯಿಂದ ಸೈನ್ಯ





1857-ಬ್ರಿಟಿಶರಿಗೆ ಶರಣಾಗತನಾದ ಬಹದ್ದೂರ್ ಶಾ ಜಾಫರ್

ಜಮಾಯಿಸಿಕೊಂಡಿದ್ದರಿಂದ ಬ್ರಿಟಿಷ್ ಸೈನ್ಯ 6,660 ರಷ್ಟಾಯಿತು. ಕ್ಯಾನಿಂಗ್, ಲಾರೆನ್ಸ್ ಮತ್ತು ನಿಖಲ್‌ಸನ್ ಒಗ್ಗೂಡಿ ದೆಹಲಿಯ ಮೇಲೆ ಸೆಂಪ್ಟೆಂಬರ್ 14ರಂದು ಪೂರ್ಣ ಪ್ರಮಾಣದ ಧಾಳಿ ಮಾಡಿದರು. ಎರಡೂ ಕಡೆ ಅಪಾರ ಪ್ರಾಣ ಹಾನಿಯುಂಟಾಯಿತು. ಕಾಶ್ಮೀರಿ ಗೇಟ್ ಬಳಿ ನಿಖಲ್‌ಸನ್ ತೀವ್ರವಾಗಿ ಗಾಯಗೊಂಡ. 3 ದಿನಗಳ ಸತತ ಹೋರಾಟದ ಬಳಿಕ ಬ್ರಿಟಿಷರು ದೆಹಲಿಯ ಕೇಂದ್ರ ಭಾಗವನ್ನು ಹಿಡಿದರು. ಪ್ರತಿಹೆಜ್ಜೆಯಲ್ಲೂ ಬ್ರಿಟಿಷರು ತೀವ್ರ ಪ್ರತಿರೋಧವನ್ನು ಎದುರಿಸಬೇಕಾಯಿತು. ಸೆಪ್ಟೆಂಬರ್ 20ರಂದು ಲಾಹೋರ್ ಗೇಟ್ ಮತ್ತು ಜುಮ್ಮ ಮಸೀದಿಯನ್ನು ತೀವ್ರ ಹೋರಾಟದ ನಂತರ ವಶಪಡಿಸಿಕೊಂಡರು. ಅಂತಿಮವಾಗಿ ಕೆಂಪು ಕೋಟೆಯ ದ್ವಾರವನ್ನು ಸಿಡಿಸಿ ಒಳನುಗ್ಗಿ ಅದರ ಬತೇರಿಯಿಂದ ಬಾವುಟವನ್ನು ಹಾರಿಸಿದರು. ಬಹಾದ್ದೂರ್ ಷಾ ಹುಮಾಯೂನ್ ಗೋರಿಯ ಬಳಿ ಅವಿತಿಟ್ಟುಕೊಂಡನು. ನಂತರ ಹಡ್ಸನ್‌ಗೆ ಶರಣಾಗತನಾದನು. ನಂತರ ಅವನನ್ನು ವಿಚಾರಣೆಗೆ ಗುರಿಪಡಿಸಿ ಜೀವವಾಧಿ ಶಿಕ್ಷೆಯನ್ನು ವಿಧಿಸಲಾಯಿತು. ಅವನನ್ನು ರಂಗೂನ್ ಜೈಲಿಗೆ ಕಳುಹಿಸಲಾಯಿತು. ಬಹಾದ್ದೂರ್‌ಷಾ ಅಲ್ಲಿಯೇ ಮರಣಿಸಿದ.

ದೆಹಲಿಯನ್ನು ವಶಪಡಿಸಿಕೊಳ್ಳುವ ಮೂಲಕ ಬ್ರಿಟಿಷರು ಬಂಡಾಯದ ಬೆನ್ನೆಲುಬನ್ನೇ ಮುರಿದರು. ಅವರ ವಿಜಯ ಯಾತ್ರೆ ಇಲ್ಲಿಂದ ಯಶಸ್ವಿಯಾಗಿ ನಿರಂತರವಾಗಿ ಮುಂದುವರೆಯಿತು. ಬ್ರಿಟಿಷರ ಮುಂದಿನ ಗುರಿ ಲಖನೌ. ಬ್ರಿಟಿಷ್ ಪಡೆಗಳು ಜಂಗ್



ಬಹಾದ್ದೂರ್‌ನ ಗೂರ್ಖಾ ಪಡೆಗಳ ನೆರವಿನಿಂದ ಮಾರ್ಚ್ 21ರಂದು ಲಖನೌ ಅನ್ನು ವಶಪಡಿಸಿಕೊಂಡರು. ನಂತರ ಕಾಲಿನ್ ಕ್ಯಾಂಪ್‌ಬೆಲ್ ರೋಹಿಲ್ ಖಂಡ್ ದಂಗೆಯ ಪ್ರಮುಖ ನಾಯಕರಾದ ಬರೆಲಿಯಾ ಖಾನ್ ಬಹಾದ್ದೂರ್ ಖಾನ್ ಮತ್ತು ಮೌಲ್ವಿ ಅಹಮದುಲ್ಲಾರನ್ನು ಸೋಲಿಸಿ ಆ ಪ್ರದೇಶಗಳನ್ನು ಮತ್ತೆ ವಶಪಡಿಸಿಕೊಂಡನು. ಇದರ ನಂತರ ಕ್ಯಾಂಪ್‌ಬೆಲ್ ಔದ್ ಪ್ರಾಂತ್ಯವನ್ನು ವಶಪಡಿಸಿಕೊಳ್ಳಲು ಮುಂದಾದ. ತಾಂತ್ಯಾಟೋಪಿ ಇಲ್ಲಿ ಗೆರಿಲ್ಲಾ ಯುದ್ಧ ತಂತ್ರವನ್ನು ಅನುಸರಿಸಿದ. ಅವನ ಸುಮಾರು 80,000 ಅನುಯಾಯಿಗಳು ಸಣ್ಣ ಗುಂಪುಗಳಲ್ಲಿ ಬ್ರಿಟಿಷ್ ಪಡೆಗಳ ಮೇಲೆಮಿಂಚಿನ ಧಾಳಿ ಮಾಡಿ ಅವರನ್ನು ಹಣ್ಣುಗಾಯಿ ನೀರುಗಾಯಿ ಮಾಡಿದರು. ಲಾರ್ಡ್ ಕ್ಲೈಡೆ ನಾನಾ ಸಾಹೇಬ್ ಮತ್ತು ಔದ್‌ನ ಬೇಗಂರನ್ನು ನೇಪಾಳ್ ಗಡಿಯವರೆಗೂ ಅಟ್ಟಿಸಿಕೊಂಡು ಹೋದ. ಅನೇಕ ಬಂಡಾಯಗಾರರು ಶರಣಾಗತರಾದರೆ ಮತ್ತೆ ಕೆಲವರು ನೇಪಾಳಕ್ಕೆ ಪಲಾಯನ ಮಾಡಿದರು. ಈ ಯಶಸ್ಸುಗಳ ನಂತರ ಬ್ರಿಟಿಷ್ ಮಧ್ಯಭಾರತದಲ್ಲಿ ಸಿಪಾಯಿ ದಂಗೆಯ 3 ಮುಖ್ಯ ನಾಯಕರಾದ ತಾಂತ್ಯಾ ಟೋಪಿ, ರಾಣಿ ಲಕ್ಷ್ಮಿಭಾಯಿ ಮತ್ತು ಕುನ್ವರ್ ಸಿಂಗ್ ಎಂಬ ತ್ರಿವಳಿಗಳನ್ನೆದುರಿಸಬೇಕಾಯಿತು. ರೋಸ್ ಮಾರ್ಚ್ 25ರಂದು ಝಾನ್ಸಿಯ ಮೇಲೆ ಧಾಳಿ ಮಾಡಿದ. ರಾಣಿ ಲಕ್ಷ್ಮಿಭಾಯಿ ರೋಸ್‌ನ ಧಾಳಿಗೆ ತೀವ್ರ ಪ್ರತಿರೋಧವನ್ನೊಡ್ಡಿದಳು. ಒಂದು ವಾರದ ನಿರಂತರ ಯುದ್ಧದ ನಂತರ ಕೋಟೆಯ ಗೋಡೆ ಬಿರುಕು ಬಿಟ್ಟಿತು. ಇಂತಹ ಬಿಕ್ಕಟ್ಟಿನ ಸನ್ನಿವೇಶದಲ್ಲಿ ತಾಂತ್ಯಾ 22000 ಜನರೊಂದಿಗೆ ಝಾನ್ಸಿ ರಾಣಿಯ ಬೆಂಬಲಕ್ಕೆ ಬಂದ. ರೋಸ್ ವೀರಾವೇಶದಿಂದ ಹೋರಾಡಿ ತಾಂತ್ಯಾನ ಪಡೆಗಳು ಕಲ್ಪಿ ಕಡೆಗೆ ಪಲಾಯನ ಮಾಡುವಂತೆ ಮಾಡಿದನು. ನಂತರ ತನ್ನ ಧಾಳಿಯನ್ನು ಝಾನ್ಸಿಯ ಕೋಟೆಯ ಮೇಲೆ ಕೇಂದ್ರೀಕರಿಸಿದನು. ಈ ಧಾಳಿಯಿಂದ ರಾಣಿ ಏಪ್ರಿಲ್ 4ರಂದು ತನ್ನ ಕೆಲವು ಸಹಾಯಕರೊಂದಿಗೆ ಕೋಟೆಯನ್ನು ತೆರವು ಮಾಡಿದಳು. 6 ರಂದು ಝಾನ್ಸಿಯ ಯುದ್ಧ ಕೊನೆಗೊಂಡಿತು. ರಾಣಿ ಕಲ್ಪಿಯಲ್ಲಿ ತಾಂತ್ಯಾನೊಂದಿಗೆ ಸೇರಿಕೊಂಡಳು. ಆದರೂ ರೋಸ್‌ನ ಧಾಳಿಯನ್ನು ತಡೆಯಲಾರದೆ ಅಲ್ಲಿಂದ ಗೋಪಾಲಪುರಕ್ಕೆ ಪಲಾಯನ ಮಾಡಿದಳು. ಅಲ್ಲಿ ಆಕೆಗೆ ಒಂದು ಯೋಜನೆಯಂತೆ ತನ್ನ ಯುದ್ಧವನ್ನು ಸುರಕ್ಷಿತ ತಾಣವೊಂದರಿಂದ



ಮುಂದುವರೆಸಲು ಗ್ವಾಲಿಯರ್‌ನ ಕೋಟೆಯನ್ನು ವಶಪಡಿಸಿಕೊಂಡಳು. ರಾವ್ ಸಾಹೇಬ್, ತಾಂತ್ಯಾ ಅಲ್ಲಿಯ ಖಜಾನೆಯ ಹಣ ಮತ್ತು ಆಯುಧಗಳನ್ನು ವಶಪಡಿಸಿಕೊಂಡು ನಾನಾ ಸಾಹೇಬನನ್ನು ಪೇಶ್ವಾ ಆಗಿ ಘೋಷಿಸಿ ಯುದ್ಧಕ್ಕೆ ಸನ್ನದ್ಧರಾದರು. ರಾಣಿಯೇ ಪುರುಷ ವೇಶ ಧರಿಸಿ ಸ್ವತಃ ರಣರಂಗಕ್ಕಿಳಿದು ನಾಯಕತ್ವ ನೀಡಿ ಅಪ್ರತಿಮವಾಗಿ ಹೋರಾಡಿದಳು. ಇತರ ಸೈನಿಕರು ಪಲಾಯನ ಮಾಡಿದರೂ ಆಕೆ ಎದೆಗುಂದದೆ ಹೋರಾಟವನ್ನು ಮುಂದುವರಿಸುತ್ತಿದ್ದಾಗ ಒಬ್ಬ ಸೈನಿಕ ಆಕೆಯನ್ನು ಕತ್ತರಿಸಿ ನೆಲಕ್ಕುರುಳಿಸಿದನು. ಆಕೆ ಸತ್ತಾಗ ಹಗ್ ರೋಸ್ ಆಕೆಯನ್ನು "ಉತ್ತಮ ಮತ್ತು ಬಂಡಾಯಗಾರರಲ್ಲೇ ಅತ್ಯಂತ ಧೈರ್ಯಶಾಲಿಯಾದ ಬಂಡಾಯಗಾರ್ತಿ" ಎಂದು ಸಂಬೋಧಿಸಿದ.

ಹೀಗೆ ಜೂನ್ 20, 1858 ರಂದು ಝಾನ್ಸಿಯ ಪತನದೊಂದಿಗೆ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಮುಕ್ತಾಯವಾಯಿತು. ಹೀಗೆ ಸ್ವಾತಂತ್ರ ಹೋರಾಟಗಾರರು ಇಟ್ಟ ಅಂಬೆಗಾಲುಗಳು ಕ್ರಮೇಣ ದಿಟ್ಟಹೆಜ್ಜೆಗಳಾಗಿ 1947ರಲ್ಲಿ ಸ್ವಾತಂತ್ರ್ಯ ಪ್ರಾಪ್ತಿಯಾಗಲು ಸಹಕಾರಿಯಾದವು.



## ದೇಶ ತಿಳಿಯೋಣ - ದೇಶ ಬದಲಿಸೋಣ

### ಸ್ವಾತಂತ್ರ್ಯೋತ್ಸವ - 50 ಆಚರಣಾ ಸಮಿತಿಯ ಉದ್ದೇಶಗಳು

1. ವಿದ್ಯಾರ್ಥಿ, ಯುವ ಜನರು, ಹಾಗೂ ಜನಸಾಮಾನ್ಯರಲ್ಲಿ ರಾಷ್ಟ್ರಪ್ರೇಮ ಹಾಗೂ ರಾಷ್ಟ್ರನಾಯಕರಲ್ಲಿ ಗೌರವ ಮೂಡಿಸುವುದು.
2. ವಿಜ್ಞಾನ ಚಟುವಟಿಕೆಗಳಲ್ಲಿ ಆಸಕ್ತಿ ಮೂಡಿಸುವುದು ಹಾಗೂ ವೈಜ್ಞಾನಿಕ ಮನೋಭಾವ ಬೆಳೆಸುವುದು. ವಿಚಾರ ಸಂಕಿರಣ ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ ನಮ್ಮ ಸ್ವಾತಂತ್ರ್ಯ ಹೋರಾಟದ ವಿವಿಧ ಆಯಾಮಗಳ ಪರಿಚಯ ಮೂಡಿಸುವುದು.
3. ಚಟುವಟಿಕೆಯಾಧಾರಿತ ಹಾಗೂ ಸಂತಸ ಕಲಿಕೆಯ ಭೋದನೆಗೆ ಒತ್ತು ನೀಡುವುದು.
4. ಶಾಲೆಗಳಲ್ಲಿರುವ ವಿಜ್ಞಾನ ಹಾಗೂ ಕಲಾ ಸಂಘಗಳನ್ನು ಕ್ರಿಯಾಶೀಲ ಗೊಳಿಸುವುದು ಮತ್ತು ಅವುಗಳನ್ನು ಅಸ್ತಿತ್ವಕ್ಕೆ ತರುವುದು.
5. ಮೇಲಿನ ಉದ್ದೇಶಗಳಿಗೆ ಸಹಾಯವಾಗುವಂತೆ ಪ್ರಕಟನೆಗಳನ್ನು ಹೊರತರುವುದು.
6. ಸಮಾಜದ ಅಭಿವೃದ್ಧಿಯಲ್ಲಿ ವಿವಿಧ ಜನ ತೊಡಗುವಂತೆ ಮಾಡುವುದು.

### ಭಾರತ ಜ್ಞಾನ ವಿಜ್ಞಾನ ಸಮಿತಿಯ ಉದ್ದೇಶಗಳು

1. ಮೊದಲಿನಿಂದಲೂ ಜನರ ಬೆಂಬಲವನ್ನು ಸಂಪೂರ್ಣ ಸಾಕ್ಷರತಾ ಆಂಧೋಲನಕ್ಕೆ ಒದಗಿಸಿಕೊಡುವುದು.
2. ಯೋಜನೆಯ ಎಲ್ಲಾ ಹಂತಗಳಲ್ಲೂ ಸಹಕರಿಸುವುದು - ಜನರನ್ನು, ಪರಿಸರವನ್ನು ಯೋಜನೆಯ ಸಹಾಯಕ್ಕೆ ತಿರುಗಿಸುವುದು - ತರಬೇತಿ ನೀಡುವುದು, ಜನರ ಬೆಂಬಲವನ್ನು ಬಲಗೊಳಿಸಿ ಕಾಯ್ದಿರಿಸುವುದು.
3. ಸತತವಾಗಿ ಅಧಿಕಾರಿಗಳ, ರಾಜಕಾರಣಿಗಳ, ಸ್ವಯಂ ಸೇವಾ ಸಂಘಗಳ, ಕಾರ್ಮಿಕ ಸಂಘಗಳ, ಬುದ್ಧಿಜೀವಿಗಳ ಸಂಪರ್ಕವಿಟ್ಟುಕೊಂಡು ಸಾಕ್ಷರತಾ ಆಂದೋಲನಕ್ಕೆ ಪ್ರೋತ್ಸಾಹ ಮತ್ತು ಸಹಾಯವನ್ನು ನೀಡುವುದು.
4. ಜಿಲ್ಲೆಗಳಲ್ಲಿ ಮತ್ತು ರಾಜ್ಯಗಳಲ್ಲಿ ಭಾರತ ಜ್ಞಾನ ವಿಜ್ಞಾನ ಸಮಿತಿಯ ಕೇಂದ್ರಗಳನ್ನು ತೆರೆದು ಸಾಕ್ಷಾರತಾ ಆಂದೋಲವನ್ನು ಸ್ಥಿರಗೊಳಿಸುವುದು, ಇದರಿಂದ ಸಾಕ್ಷರತಾ ಕಾರ್ಯಕ್ರಮದ ನಂತರವೂ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ, ಮಹಿಳೆಯರ ಅಭಿವೃದ್ಧಿ, ಆರೋಗ್ಯ ಸಾಂಸ್ಕೃತಿಕ ಜಾಗೃತಿ ಮುಂದುವರಿಗಸಲು ಸಹಾಯ ಮಾಡಲಾಗುವುದು. ಸಂಘಟನೆಗಳನ್ನು ರಚಿಸುವುದು ಮತ್ತು ಜನರೊಂದಿಗೆ ವಿಶ್ವಾಸದಿಂದ ಸಂಪರ್ಕ ಹೊಂದಿರುವುದು, ಪ್ರಜಾಪ್ರಭುತ್ವದಲ್ಲಿ ಜನರನ್ನು ಅಭಿವೃದ್ಧಿಯ ಕಡೆಗೆ ಸೆಳೆದೊಯ್ಯಲು ಸಹಾಕವಾಗುವುದು.

**ಸ್ವಾತಂತ್ರ್ಯ ಸಮರದ ಆರಂಭದ ಹೆಜ್ಜೆಗಳು**